Vol - 12 June 2014 Issue No. 06 ₹ 10.00/-




# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*




**r. Hansraj Bhardwaj, His Excellency the Governor of Karnataka & Patron, The Bharat Scouts & Guides, Karnataka Presented ajya Puraskar Certificates & Awards on 11 June 2014 at Glass House, Raj bhavan, Bangalore. Sri Kimmane Rathnakar, on'ble Minister of State for Primary & Secondary Education, Govt. of Karnataka, Dr. Rajneesh Goel, Principal Secretary to overnment, Department of Higher Education, Govt. of Karnataka and Office Bearers of Bharat Scouts & Guides, karnataka re seen**



ಾಂಕ 14 ಜೂನ್ 2014ರಂದು ಬೆಂಗಳೂರು ಗ್ರಾಮಾಂತರ ಜಿಲ್ಲೆ ಡ್ಡಬಳ್ಳಾಪುರಕ್ಕೆ ಭೇಟಿ ನೀಡಿದ ಸನ್ಮಾನ್ಯ ಶ್ರೀ ಡಿ.ವಿ. ಸದಾನಂದಗೌಡ, ಕೇಂದ್ರ ಲ್ವೆ ಸಚಿವರು ಹಾಗೂ ಅಧ್ಯಕ್ಷರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ವರನ್ನು ರಾಜ್ಯ ಸಂಸ್ಥೆಯ ಪರವಾಗಿ ಅಭಿನಂದಿಸಲಾಯಿತು. ರಾಜ್ಯ ಮುಖ್ಯ ಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಜಂಟಿ ರಾಜ್ಯ ಕಾರ್ಯದರ್ಶಿಗಳಾದ ಎಂ.ಎ. ಚೆಲ್ಲಯ್ಯ, ಶ್ರೀಮತಿ ಬಿ.ವಿ. ರಾಮಲತಾ, ಕಛೇರಿ ವ್ಯವಸ್ಥಾಪಕ ೀ ಕೆ.ಹೆಚ್. ಜಯರಾಮಯ್ಯ ಚಿತ್ರದಲ್ಲಿದ್ದಾರೆ.



ಕರ್ನಾಟಕ ರಾಜ್ಯ ವಿಧಾನ ಸಭೆಯಿಂದ ವಿಧಾಪರಿಷತ್ತಿಗೆ ಆಯ್ಕೆಯಾದ ಸನ್ಮಾನ್ಯ ಶ್ರೀ ಎನ್.ಎಸ್. ಬೋಸರಾಜು, ಪೋಷಕರು, ಭಾರತ್ ಸ್ಕೌಟ್ಸ್ & ಗೈಡ್ಸ್, ರಾಯಚೂರು ಜಿಲ್ಲಾ ಸಂಸ್ಥೆ ಇವರಿಗೆ ರಾಯಚೂರು ಜಿಲ್ಲಾ ಸಂಸ್ಥೆ ವತಿಯಿಂದ ಅಭಿನಂದಿಸಲಾಯಿತು. ಚಿತ್ರದಲ್ಲಿ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಕೆ. ತಿಮ್ಮಯ್ಯ, ಜಿಲ್ಲಾ ಆಯುಕ್ತರುಗಳಾದ ಶ್ರೀ ಶೇಷಗಿರಿರಾವ್ ಕುಲಕರ್ಣಿ, ಶ್ರೀಮತಿ ಅಜೀಜಾ ಸುಲ್ತಾನ ಹಾಗೂ ಜಿಲ್ಲಾ ಪದಾಧಿಕಾರಿಗಳನ್ನು ಕಾಣಬಹುದು.



















**Dr. Hansraj Bhardwaj, His Excellency the Governor of Karnataka & Patron, The Bharat Scouts & Guides, Karnataka Presented the Certificates of Chathurtha Charan, Heerak Pankh, Rajyapuraskar & Nipun on 11th June 2014 at a function held at Glass House, Raj Bhavan, Bangalore. Sri Kimmane Rathnakar, Hon'ble Minister for Primary & Secondary Education, Dr. Rajaneesh Goel, Principal Secretary, Dept. of Higher Education and Office Bearers of State Headquarters are seen.**





ದಿನಾಂಕ 05 ಜೂನ್ 2014ರಂದು ಶಾಂತಿ ಗೃಹ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರದಲ್ಲಿ ಜರುಗಿದ "ವಿಶ್ವಪರಿಸರ ದಿನಾಚರಣೆ" ಕಾರ್ಯಾಕ್ರಮವನ್ನು ಡಾ. ಬಿ.ಎಲ್. ಭಾಗ್ಯಲಕ್ಷ್ಮಿ, ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಕರ್ನಾಟಕ ಸರ್ಕಾರ ಇವರು ಉದ್ಘಾಟಿಸಿ ಮಾತನಾಡಿದರು. ದಿನಾಚರಣೆ ಸವಿ ನೆನಪಿಗಾಗಿ ಕಛೇರಿ ಆವರಣದಲ್ಲಿ ಸಸಿ ನೆಟ್ಟರು. ಕಾರ್ಯಕ್ರಮದಲ್ಲಿ ರಾಜ್ಯ ಸಂಸ್ಥೆ ಪದಾಧಿಕಾರಿಗಳು, ರಾಷ್ಟ್ರೀಯ ಸಂಸ್ಥೆಯ ಪ್ರಾದೇಶಿಕ ಕಛೇರಿಯ ಅಧಿಕಾರಿಗಳು, ಜಿಲ್ಲಾ ಸಂಸ್ಥೆಗಳ ಪದಾಧಿಕಾರಿಗಳು ಮತ್ತು ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

# *EDITORIAL............*

Youth Programme is the totality of what young people do in Scouting (the activities), how it is done (the Scout method) and the reason why it is done (the purpose).

Scouting in true sense is the other side of democracy for youth – by the youth, for the youth and to the youth. In this democratic scenario; what is the adult's role in Scouting?

Young people are the main players and stake holders in this non-formal educational process that also requires adequate Adult Support, usually provided by adult volunteers.

Unfortunately the youth who are pushed in the second line in making policies and adults take the front line. Recent policies review also suggests that adult's age should be restricted to play the role of volunteers.

I strongly suggest to everyone involved in Programme policy that they should listen to youth, feel their needs and act according to youth trends, rather than being theoretical and using our own past experiences to frame the youth policies, let us look at youth and then decide.

In recent times Indian Scouting/ Guiding has lost the real charm and values, the reason's may be many but the main one being ,the adults imposing their decisions on youth and so young people losing their interest and going away from fundamentals.

The new concept of WOSM recently introduced as MOP and allowing the youth to post directly on the official website telling about their good turns/ success stories is the right step in breaking all barriers of un-necessary hierarchy.

So at this juncture we should be more liberal in framing the youth policies while keeping the WOSM youth policies as a backdrop before finalising the same. In future youth should have right to lead the Scout / Guide movement in India and adults should encourage them.

Our simple approach should be to make Scouting / Guiding movement of the youth and the elders enjoying being adult volunteers.

*M.A. KHALID*
*State Secretary*

# ರಾಜ್ಯ ಮುಖ್ಯ ಆಯುಕ್ತರ ನುಡಿ..........................

ಆತ್ಮೀಯರೇ,

ಜುಲೈ 13 ರಿಂದ 19ರವರೆವಿಗೆ ದೊಡ್ಡಬಳ್ಳಾಪುರದ ಡಾ॥ ಆನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರದಲ್ಲಿ ಏರ್ಪಡಿಸಿದ್ದ 27ನೇ ರಾಜ್ಯ ಜಾಂಬೋರೇಟ್‌ನ್ನು ಆಗಸ್ಟ್ 17ರಿಂದ 23ರವರೆಗೆ ನಡೆಸಲು ತೀರ್ಮಾನಿಸಿರುವುದು ನಿಮ್ಮಗಳ ಗಮನಕ್ಕೆ ಈಗಾಗಲೇ ಬಂದಿದೆ. ಬಹಳ ವರ್ಷಗಳ ನಂತರ ರಾಜ್ಯ ತರಬೇತಿ ಕೇಂದ್ರದಲ್ಲಿ ಜಾಂಬೋರೇಟ್ ಏರ್ಪಡಿಸಿರುವುದರಿಂದ ಅವಶ್ಯವಿರುವ ಹಲವು ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲು ಸಮಯಾವಕಾಶ ಬೇಕಾಗಿದೆ. ಜಾಂಬೋರೇಟ್‌ನಲ್ಲಿ ಜಿಲ್ಲೆಗಳಿಂದ ಭಾಗವಹಿಸುವ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಹಾಗೂ ದಳನಾಯಕ-ನಾಯಕಿಯರು ಜಾಂಬೋರೇಟ್‌ನಲ್ಲಿ ಆಯೋಜಿಸಿರುವ ಎಲ್ಲಾ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಲು ಸೂಚಿಸುತ್ತೇನೆ. ಈ ಬಗ್ಗೆ ಜಿಲ್ಲಾ ಕಾರ್ಯದರ್ಶಿ-ಜಂಟಿ ಕಾರ್ಯದರ್ಶಿಗಳು, ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ಸ್ ಮತ್ತು ಗೈಡ್ಸ್) ಹಾಗೂ ಅನುಭವಿ ತರಬೇತಿ ನಾಯಕ-ನಾಯಕಿಯರು ಭಾಗವಹಿಸುವವರನ್ನು ಸೂಕ್ತವಾಗಿ ತಯಾರಿಮಾಡುವಲ್ಲಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಕ್ರಮಕೈಗೊಳ್ಳಲು ಕೋರುತ್ತೇನೆ.

ನಾನು ದಿನಾಂಕ: 20/21/22 ಜೂನ್‌ರಂದು ಕೊಂಡಜ್ಜಿ ತರಬೇತಿ ಕೇಂದ್ರ ಹಾಗು ಹಾವೇರಿ / ಧಾರವಾಡ/ ಬೆಳಗಾಂ ಜಿಲ್ಲಾ ಸಂಸ್ಥೆಗಳಿಗೆ ಭೇಟಿಕೊಟ್ಟು ಜಿಲ್ಲೆಯ 2013-14ರ ಕಾರ್ಯಕ್ರಮ-ಚಟುವಟಿಕೆಗಳು - ತರಬೇತಿಗಳ ಬಗ್ಗೆ ಚರ್ಚಿಸಿ ಈ ವರ್ಷ 2014-15ರಲ್ಲಿ ಅವರುಗಳು ಯೋಜಿಸಿರುವ ಎಲ್ಲಾ ಕಾರ್ಯಕ್ರಮ ಹಾಗೂ ಮೂಲತರಬೇತಿ ಶಿಬಿರಗಳನ್ನು ಮಾಡಲೇಬೇಕೆಂದು ಸೂಚಿಸಿದ್ದೇನೆ.

ನಿಮಗೆ ತಿಳಿದಿರುವಂತೆ ರಾಜ್ಯ ಕಾರ್ಯಕಾರಿ ಸಮಿತಿಯವರು ದಿ:12.06.2014 ರಂದು ಜರುಗಿದ ಸಭೆಯಲ್ಲಿ ರಾಜ್ಯದ ಸ್ಕೌಟ್-ಗೈಡ್ ಚಳವಳಿಯ ಇತಿಹಾಸದಲ್ಲಿ ಪ್ರಥಮ ಭಾರಿಗೆ ರಾಜ್ಯ ಸಂಸ್ಥೆಯ 2014-15ನೇ ಸಾಲಿನ ಯೋಜನಾ ಲೆಕ್ಕಶೀರ್ಷಿಕೆಯಲ್ಲಿ ಪ್ರತಿ ಜಿಲ್ಲಾ ಸಂಸ್ಥೆಗೆ ಸ್ಕೌಟ್ಸ್ ವಿಭಾಗದಿಂದ ಗರಿಷ್ಠ ರೂ. 50,000/- ಹಾಗೂ ಗೈಡ್ಸ್ ವಿಭಾಗದಿಂದ ಗರಿಷ್ಠ ರೂ. 30,000/-ರೂಗಳನ್ನು ಜಿಲ್ಲಾ ಸಂಸ್ಥೆಗಳು ಈ ವರ್ಷದಲ್ಲಿ ಏರ್ಪಡಿಸುವ ಕಬ್-ಸ್ಕೌಟ್-ಬುಲ್‌ಬುಲ್-ಗೈಡ್ ಮೂಲತರಬೇತಿ ಶಿಬಿರಗಳಿಗೆ ಸಹಾಯಧನದ ರೂಪದಲ್ಲಿ ನೀಡಲು ತೀರ್ಮಾನಿಸಲಾಗಿದೆ. ಈ ಬಗ್ಗೆ ರಾಜ್ಯ ಸಂಸ್ಥೆಯಿಂದ ವಿವರವಾದ ಸುತ್ತೋಲೆ ನೀಡಲಾಗುವುದು.

ರಾಜ್ಯದ ಎಲ್ಲಾ ಜಿಲ್ಲಾ ಸಂಸ್ಥೆಗಳು ಜಿಲ್ಲೆಗಳ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರಿಂದ ಪ್ರತಿಬಾರಿಯಂತೆ ಮೂಲತರಬೇತಿ ಶಿಬಿರಗಳನ್ನು ಏರ್ಪಡಿಸಲು ಸುತ್ತೋಲೆಯನ್ನು ಪಡೆದು, ತರಬೇತಿಗಳನ್ನು ತಕ್ಷಣ ಏರ್ಪಡಿಸಬೇಕೆಂದು ಕೋರುತ್ತೇನೆ. ನಿಮಗೆ ತಿಳಿದಿರುವಂತೆ 2012-13 ಮತ್ತು 2013-14ನೇ ವರ್ಷಗಳಲ್ಲಿ ಹಲವು ಕಾರಣಗಳಿಂದ ಕೆಲವು ಜಿಲ್ಲಾ ಸಂಸ್ಥೆಗಳು ಮೂಲತರಬೇತಿ ಶಿಬಿರಗಳನ್ನು ಏರ್ಪಡಿಸಲು ಸಾಧ್ಯವಾಗಲಿಲ್ಲ. ಇವುಗಳಲ್ಲಿ ಹಿಂದಿನ ವರ್ಷಗಳಲ್ಲಿ ಸರ್ವಶಿಕ್ಷ ಅಭಿಯಾನದ ಹಣಸಹಾಯ ಜಿಲ್ಲಾ ಡಯಟ್‌ಗಳ ಮೂಲಕ ದೊರಕುತ್ತಿದ್ದು, ಕಳೆದ ಎರಡು ವರ್ಷಗಳಿಂದ ಸ್ಕೌಟ್ಸ್-ಗೈಡ್ಸ್‌ನ ತರಬೇತಿ ಶಿಬಿರಗಳಿಗೆ ಮೇಲ್ಕಂಡ ಸೌಲಭ್ಯ ದೊರಕಿರುವುದಿಲ್ಲ.

ರಾಜ್ಯದ ಜಿಲ್ಲಾ ಸಂಸ್ಥೆಗಳ ಎಲ್ಲಾ ಸಹೋದ್ಯೋಗಿಗಳಲ್ಲಿ ನನ್ನ ಮನವಿ, ನಾವುಗಳೆಲ್ಲರೂ ಸ್ಕೌಟ್-ಗೈಡ್ ಚಳವಳಿಯ ಇತಿಹಾಸದ ಪುಟಗಳನ್ನು ತಿರುವಿದಾಗ - ಯಾವ ರೀತಿ ಈ ಅಂತರಾಷ್ಟ್ರೀಯ ಯುವಸಂಘಟನೆಯು ತನ್ನ ತತ್ವ-ಸಿದಾಂತ ಹಾಗು ಉದಾತ್ತ ಜೀವನೋತ್ಸಾಹದ ವಿಚಾರಗಳನ್ನು ಯುವಕ-ಯುವತಿಯವರಿಗೆ ನೀಡುವ ಮೂಲಕ ಅವರುಗಳಲ್ಲಿ ಆತ್ಮವಿಶ್ವಾಸ-ಸದೃಢತೆ ಹಾಗೂ ಸೌಹಾರ್ದತೆಗಳನ್ನು ಉಳಿಸಿ - ಬೆಳೆಸುವ ಮನೋಧರ್ಮವನ್ನು ಹಲವಾರು ದಶಕಗಳಿಂದ ನೀಡುತ್ತಿದೆ ಎಂಬುದನ್ನು ಮನಗಾಣಬೇಕೆಂದು ಕೋರುತ್ತೇನೆ. ಇದು ನಾನು ಸ್ವತ: ಕಳೆದ ನಾಲ್ಕು ದಶಕಗಳಿಗೂ ಹೆಚ್ಚಿನ ಸ್ವಾನುಭವದಿಂದ ಉಂಟಾದ ಆತ್ಮವಿಶ್ವಾಸ-ಇದು ರಾಜ್ಯದ ನನ್ನೆಲ್ಲಾ ಸ್ಕೌಟ್-ಗೈಡ್ ಸಹೋದ್ಯೋಗಿಗಳಿಗೂ ಆಗಿರುವ ಅನುಭವ - ವಿಶ್ವಾಸ ಎಂಬ ನಂಬಿಕೆ ನನ್ನದು.

ರಾಜ್ಯ ಸಂಸ್ಥೆ ಮೂಲತರಬೇತಿಗಳಿಗೆ ಜಿಲ್ಲೆಗಳಿಗೆ ಈ ವರ್ಷದಲ್ಲಿ ನೀಡುತ್ತಿರುವ ಹಣ ಸಹಾಯಧನಮಾತ್ರ, ಜಿಲ್ಲೆಗಳು ಏರ್ಪಡಿಸುವ ಮೂಲತರಬೇತಿಗೆ ಇಲ್ಲಿಯವರೆವಿಗೆ ಜಿಲ್ಲಾ ಸಂಸ್ಥೆಗಳು ಈ ಹಿಂದಿನ ವರ್ಷಗಳಲ್ಲಿ ಯಾವ ರೀತಿ ಶಿಕ್ಷಣ ಇಲಾಖೆಯ ಅಧಿಕಾರಿಗಳು ನೀಡುತ್ತಿದ್ದ ಸುತ್ತೋಲೆಯ ಆಧಾರದಲ್ಲಿ ತರಬೇತಿ ನಡೆಸಲು ಸೂಕ್ತ ಏರ್ಪಾಡು ಮಾಡುತ್ತಿದ್ದೆವೋ ಅದೇ ರೀತಿ ಈ ವರ್ಷದಲ್ಲಿಯೂ ಎಲ್ಲಾ ಏರ್ಪಾಡುಗಳನ್ನು ಮಾಡಲೇಬೇಕು. ಇದು ಅನಿವಾರ್ಯ ಹಾಗೂ ಅವಶ್ಯ ಕೂಡ. ಕಾರಣ, ರಾಜ್ಯ ಸಂಸ್ಥೆ ಪ್ರಥಮಬಾರಿಗೆ ಜಿಲ್ಲೆಗಳಿಗೆ ಮೂಲತರಬೇತಿ ಶಿಬಿರಗಳಿಗೆ ತನ್ನ 2014–15ನೇ ಸಾಲಿನ ಯೋಜನಾ ಶೀರ್ಷಿಕೆಗಳಡಿಯಲ್ಲಿ ನೀಡಲು ತೀರ್ಮಾನಿಸಿರುವ ಹಣ – ಸಹಾಯಧನ – ಸಬ್ಸಿಡಿ ಮಾತ್ರ ಎಂಬುದನ್ನು ಜಿಲ್ಲಾ ಸಂಸ್ಥೆಗಳ ಗಮನಕ್ಕೆ ತರಬಯಸುತ್ತೇನೆ. ಆದುದರಿಂದ ರಾಜ್ಯದ ಎಲ್ಲಾ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಹಾಗು ತರಬೇತಿ ನಡೆಸಲು ತಯಾರಿ ನಡೆಸುತ್ತಿರುವ ನಾಯಕ – ನಾಯಕಿಯರು ಈ ವಿಚಾರದಲ್ಲಿ ಹೆಚ್ಚಿನ ಆಸಕ್ತಿ ವಹಿಸಲು ಸೂಚಿಸುತ್ತೇನೆ.

ಈ ವಿಚಾರದಲ್ಲಿ ನಿಮ್ಮೊಂದಿಗೆ ನನ್ನ ಚಿಂತನೆಯೊಂದನ್ನು ಹಂಚಿಕೊಳ್ಳಬಯಸುತ್ತೇನೆ. ತರಬೇತಿಗಳಿಗೆ ಜಿಲ್ಲೆಗಳಿಗೆ ನಿಗದಿಮಾಡಿರುವ ಸಹಾಯಧನದಲ್ಲಿ ಪೂರ್ತಿಯಾಗಿ ಜಿಲ್ಲೆಗಳಿಗೆ ನೀಡಲು ಅವಕಾಶವಾಗದಿದ್ದ ಪಕ್ಷದಲ್ಲಿ ಈ ಹಣವನ್ನು ಜಿಲ್ಲೆಗಳ "ಸಮುದಾಯ ಸೇವಾ ಶಿಬಿರಗಳಿಗೆ ಸ್ಥಳೀಯ ಹಾಗು ಜಿಲ್ಲಾ ರ್‍ಯಾಲಿಗಳಿಗೆ ಹಾಗು ಚಟುವಟಿಕೆಗಳಿಗೆ" ನೀಡುವ ಬಗ್ಗೆ ರಾಜ್ಯ ಹಣಕಾಸು ಮತ್ತು ಕಾರ್ಯಕಾರಿ ಸಮಿತಿಯ ಒಪ್ಪಿಗೆ ಪಡೆದು ನೀಡುವ ಬಗ್ಗೆಯೂ ಚಿಂತಿಸಲಾಗುವುದು. ಆದುದರಿಂದ ರಾಜ್ಯದ ಎಲ್ಲಾ ಜಿಲ್ಲಾ ಸಂಸ್ಥೆಗಳೂ ಈ ಬಗ್ಗೆ ತಕ್ಷಣ ಕ್ರಮ ಕೈಗೊಂಡು ಈ ವರ್ಷದಲ್ಲಿ 2014–15ನೇ ಸಾಲಿನಲ್ಲಿ ಕನಿಷ್ಠ ಒಂದು ಹಾಗು ಅನುಕೂಲವಿದ್ದಲ್ಲಿ ಎರಡು ಮೂಲತರಬೇತಿ ಶಿಬಿರಗಳನ್ನು ಏರ್ಪಡಿಸಲೇಬೇಕೆಂದು ಸೂಚಿಸುತ್ತೇನೆ.

ರಾಜ್ಯ ಸಂಸ್ಥೆಯವರು ಈಗಾಗಲೇ ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರಿಗೆ ಸ್ಕೌಟ್–ಗೈಡ್ ಚಳವಳಿಯು ರಾಜ್ಯದೆಲ್ಲೆಡೆ ಹೆಚ್ಚಿಸಲು ಅವಶ್ಯವಾಗಿ ಬೇಕಾಗಿರುವ ಸುತ್ತೋಲೆ ಆದೇಶಗಳು, ಸ್ಕೌಟರ್ಸ್–ಗೈಡರ್ಸ್‌ಗಳಿಗೆ ಅಗತ್ಯವಾಗಿ ಬೇಕಾಗಿರುವ ಪ್ರೋತ್ಸಾಹ, ಬೆಂಬಲದ ಬಗ್ಗೆ ಪತ್ರಗಳನ್ನು ಬರೆದಿದ್ದು, ಸೂಕ್ತ ಆದೇಶಗಳ ನಿರೀಕ್ಷೆಯಲ್ಲಿದ್ದೇವೆ.

ಇನ್ನೊಂದು ಪ್ರಮುಖ ವಿಷಯವನ್ನು ನಿಮ್ಮೊಂದಿಗೆ ಹಂಚಿಕೊಳ್ಳಬಯಸುತ್ತೇನೆ. ನನ್ನ ಹಲವಾರು ವರ್ಷಗಳ ರಾಜ್ಯ ಪ್ರವಾಸಗಳಲ್ಲಿ ಸ್ಪಷ್ಟಪಡಿಸಿರುವಂತೆ, ಎಲ್ಲಾಜಿಲ್ಲೆಗಳಲ್ಲಿ ಕನಿಷ್ಠ ಒಬ್ಬರು ಎಲ್‌ಟಿ(ಸ್ಕೌಟ್ಸ್) ಮತ್ತು (ಗೈಡ್ಸ್) (ರೋವರ್ಸ್) (ರೇಂಜರ್ಸ್) ಹಾಗು ಒಬ್ಬರು ಎಎಲ್‌ಟಿ (ಸ್ಕೌಟ್ಸ್–ಗೈಡ್ಸ್) (ರೋವರ್ಸ್–ರೇಂಜರ್ಸ್) ಹಾಗು ಕನಿಷ್ಠ ಒಬ್ಬರು ಎಎಲ್‌ಟಿ (ಕಬ್ಸ್ ಮತ್ತು ಬುಲ್‌ಬುಲ್‌ಗಳು) ಇರಲೇಬೇಕೆಂಬ ಅನಿವಾರ್ಯತೆಯನ್ನು ನಿಮ್ಮಗಳ ಗಮನಕ್ಕೆ ತಂದಿದ್ದೇನೆ. ಇದರೊಂದಿಗೆ ಎಲ್ಲಾ ಜಿಲ್ಲೆಗಳಲ್ಲಿ ಕನಿಷ್ಠ 30 ವೃಕ್ಷಮಣಿದಾರಿಗಳು ಇರಲೇಬೇಕು. ಆಗ ಜಿಲ್ಲಾ ಸಂಸ್ಥೆಗಳು ಪ್ರತಿವರ್ಷ ಏರ್ಪಡಿಸುವ ಮೂಲ ಹಾಗು ಮುಂದುವರೆದ ತರಬೇತಿ ಕಾರ್ಯಕ್ರಮಗಳು ಯಶಸ್ವಿಯಾಗಲು ಸಹಕಾರಿಯಾಗುವುದು.

ಶತಮಾನಕ್ಕೂ ಹೆಚ್ಚಿನ ಇತಿಹಾಸವುಳ್ಳ ಸ್ಕೌಟ್ ಗೈಡ್ ಚಳವಳಿಯನ್ನು ಎಲ್ಲಾ ಶಾಲೆ–ಕಾಲೇಜುಗಳಲ್ಲಿ ಹೆಚ್ಚಿಸುವ ಪ್ರಾಮಾಣಿಕ ಪ್ರಯತ್ನ ನಾವೆಲ್ಲಾ ಮಾಡುತ್ತಿದ್ದು, ಚಳವಳಿಯ ವಿವಿಧ ಹಂತಗಳಲ್ಲಿ ಸೇವೆ ಸಲ್ಲಿಸುತ್ತಿರುವ ದಳ–ಘಟಕಗಳ ನಾಯಕ–ನಾಯಕಿಯರುಗಳು ತಮ್ಮ ಘಟಕಗಳ ಮಕ್ಕಳಿಗೆ ವಿವಿಧ ಹಂತದ ಪ್ರಶಸ್ತಿ–ಪುರಸ್ಕಾರಗಳಾದ ಚತರ್ಥಚರಣ್, ಹೀರಕ್‌ಪಂಕ್, ರಾಜ್ಯ ಪುರಸ್ಕಾರ ಮತ್ತು ನಿಪುಣ್ ಪಡೆಯುವಲ್ಲಿ ಶ್ರಮವಹಿಸಿ ರಾಜ್ಯ ಪುರಸ್ಕಾರ ಮತ್ತು ನಿಪುಣ್ ಪಡೆಯುವಲ್ಲಿ ಶ್ರಮವಹಿಸಿ ಸೂಕ್ತ ಮಾರ್ಗದರ್ಶನ ಮಾಡಬೇಕೆಂದು ಕೋರುತ್ತೇನೆ.

ತಮ್ಮ ವಿಶ್ವಾಸಿ

ಕೊಂಡಜ್ಜಿ ಬ. ಷಣ್ಮುಖಪ್ಪ

## ರಾಜ್ಯ ವಾರ್ತೆಗಳು................

### ಬೆಂಗಳೂರಿನ ರಾಜಭವನದ ಗಾಜಿನಮನೆಯಲ್ಲಿ ದಿನಾಂಕ 11 ಜೂನ್ 2014 ರಂದು ಜರುಗಿದ ರಾಜ್ಯ ಪುರಸ್ಕಾರ ರ್‍ಯಾಲಿ

ದಿನಾಂಕ 11-06-2014 ರಂದು ಬೆಂಗಳೂರಿನ ರಾಜಭವನದಲ್ಲಿ ನಡೆದ ಸಮಾರಂಭವೊಂದರಲ್ಲಿ ಕರ್ನಾಟಕದ ಘನತೆವೆತ್ತ ರಾಜ್ಯಪಾಲರು ಹಾಗೂ ರಾಜ್ಯ ಸಂಸ್ಥೆಯ ಪೋಷಕರೂ ಆದ ಡಾ॥ ಹಂಸರಾಜ್ ಭಾರದ್ವಾಜ್ ರವರು ಕಬ್-ಬುಲ್‌ಬುಲ್ಸ್‌ಗಳಿಗೆ, ಸ್ಕೌಟ್-ಗೈಡ್‌ಗಳಿಗೆ ಮತ್ತು ರೋವರ್-ರೇಂಜರ್ಸ್‌ಗಳಿಗೆ ಚತುರ್ಥ ಚರಣ್ ಹೀರಖ್ ಪಂಖ್ ರಾಜ್ಯ ಪುರಸ್ಕಾರ ಮತ್ತು ನಿಪುಣ್ ಪದಕ ಪ್ರಶಸ್ತಿಗಳನ್ನು ನೀಡಿದರು. ಶ್ರೀಯುತರು ಈ ಸಂದರ್ಭದಲ್ಲಿ ಮಾತನಾಡುತ್ತಾ ತಾವು ಬಾಲ್ಯದಲ್ಲಿ ಸ್ಕೌಟ್ ಆಗಿ ಸಲ್ಲಿಸಿದ ಸೇವೆಯನ್ನು ನೆನಪಿಸಿಕೊಂಡರು. ಸಮಾಜದ ಒಳಿತಿಗಾಗಿ ಸ್ಕೌಟ್-ಗೈಡ್‌ಗಳು ತಮ್ಮ ಕೈಲಾದ ಸೇವೆ ಸಲ್ಲಿಸಬೇಕೆಂದು ಕರೆ ನೀಡಿದರು.

ಗೌರವ ಅತಿಥಿಗಳಾಗಿ ಭಾಗವಹಿಸಿದ್ದ ಶ್ರೀ ಕಿಮ್ಮನೆ ರತ್ನಾಕರ, ಸನ್ಮಾನ್ಯ ರಾಜ್ಯ ಮಂತ್ರಿಗಳು ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ, ಕರ್ನಾಟಕ ಸರ್ಕಾರ ಇವರು ಮಾತನಾಡುತ್ತಾ ಸ್ಕೌಟ್-ಗೈಡ್‌ಗಳು ಉತ್ತಮ ಮೌಲ್ಯಗಳನ್ನು ಬೆಳೆಸಿಕೊಳ್ಳುವತ್ತ ಪ್ರಯತ್ನಶೀಲರಾಗಬೇಕೆಂದು ಕರೆಕೊಟ್ಟರು. ರಾಜ್ಯದಲ್ಲಿ ಸ್ಕೌಟ್-ಗೈಡ್ ಚಟುವಟಿಕೆಗಳಿಗೆ ಸರ್ಕಾರದ ವತಿಯಿಂದ ಎಲ್ಲಾ ರೀತಿಯ ಬೆಂಬಲ ಪ್ರೋತ್ಸಾಹ ನೀಡುವುದಾಗಿ ಭರವಸೆ ನೀಡಿದರು.

ಡಾ. ರಜನೀಶ್ ಗೋಯಲ್, ಭಾ.ಆ.ಸೇ. ಪ್ರಧಾನ ಕಾರ್ಯದರ್ಶಿಗಳು, ಉನ್ನತ ಶಿಕ್ಷಣ ಇಲಾಖೆ ಕರ್ನಾಟಕ ಸರ್ಕಾರ ಇವರು ಸಮಾರಂಭದಲ್ಲಿ ಉಪಸ್ಥಿತರಿದ್ದರು. ಶ್ರೀ ಟಿ.ಎಸ್. ಲೂಕಾಸ್, ರಾಜ್ಯ ಆಯುಕ್ತರು (ಸ್ಕೌಟ್ಸ್), ಶ್ರೀ ಟಿ. ಪ್ರಭಾಕರ್, ರಾಜ್ಯ ಖಜಾಂಚಿ ಮತ್ತು ರಾಜ್ಯ ಪದಾಧಿಕಾರಿಗಳು ಉಪಸ್ಥಿತರಿದ್ದರು. ಪ್ರಾರಂಭದಲ್ಲಿ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ ರಾಜ್ಯ ಮುಖ್ಯ ಆಯುಕ್ತರು, ಘನತೆವೆತ್ತ ರಾಜ್ಯಪಾಲರನ್ನು ಗೌರವಾನ್ವಿತ ಅತಿಥಿಗಳನ್ನು ಮತ್ತು ಆಹ್ವಾನಿತರನ್ನು ಸ್ವಾಗತಿಸಿದರು. ಕೊನೆಯಲ್ಲಿ ಶ್ರೀ ಎಂ.ಎ. ಖಾಲಿದ್, ರಾಜ್ಯ ಕಾರ್ಯದರ್ಶಿಗಳು ವಂದನಾರ್ಪಣೆ ಸಲ್ಲಿಸಿದರು.

ರಾಜ್ಯದ ವಿವಿಧ ಜಿಲ್ಲೆಗಳಿಂದ 47 ಕಬ್ಸ್, 30 ಬುಲ್‌ಬುಲ್ಸ್, 146 ಸ್ಕೌಟ್ಸ್, 135ಗೈಡ್ಸ್, 07 ರೋವರ್ಸ್, 06 ರೇಂಜರ್ಸ್‌ಗಳು ಪದಕಗಳನ್ನು ಸ್ವೀಕರಿಸಿದರು. ರಾಜ್ಯದಲ್ಲಿ 663 ಕಬ್ಸ್, 517 ಬುಲ್ಸ್, 783 ಸ್ಕೌಟ್ಸ್, 688 ಗೈಡ್ಸ್, 15 ರೋವರ್ಸ್, 06 ರೇಂಜರ್ಸ್ ಪದಕಗಳಿಗೆ ಅರ್ಹತೆ ಪಡೆದಿದ್ದರು.

ರಾಜ್ಯದ ವಿವಿಧ ಜಿಲ್ಲೆಗಳ ಪದಾಧಿಕಾರಿಗಳು, ದಳನಾಯಕ-ನಾಯಕಿಯರು, ಪೋಷಕರು ಮತ್ತು ಹಿತೈಷಿಗಳು ಸಹ ಸಮಾರಂಭದಲ್ಲಿ ಭಾಗವಹಿಸಿದ್ದರು.

### "ವಿಶ್ವ ಪರಿಸರ ದಿನಾಚರಣೆ"

ದಿನಾಂಕ 05-06-2014 ರಂದು ಶಾಂತಿಗೃಹ ಸ್ಕೌಟ್-ಗೈಡ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರದಲ್ಲಿ **"ವಿಶ್ವಪರಿಸರ"** ದಿನಾಚರಣೆಯನ್ನು ಆಚರಿಸಲಾಯಿತು. ಅಂದು ಬೆಳಗ್ಗೆ ನಡೆದ ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ ಡಾ॥ ಬಿ.ಎಲ್. ಭಾಗ್ಯಲಕ್ಷ್ಮಿ, ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಕರ್ನಾಟಕ ಸರ್ಕಾರ ಇವರು ಮಾತನಾಡುತ್ತಾ ಪರಿಸರವನ್ನು ಸಂರಕ್ಷಿಸುವ ಅವಶ್ಯಕತೆ ಬಗ್ಗೆ ಒತ್ತಿ ಹೇಳಿದರು. ಪರಿಸರವನ್ನು ಸಂರಕ್ಷಿಸುವ ನಿಟ್ಟಿನಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಮಾದರಿಯಾಗಿರಬೇಕೆಂದು ಹೇಳಿದರು. ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ. ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ದಿನಾಚರಣೆಯ

ಸವಿನೆನಪಿಗಾಗಿ ಮುಖ್ಯ ಅತಿಥಿಗಳು ಹಾಗೂ ಗಣ್ಯರು ಸಸಿ ನೆಟ್ಟರು. ರಾಜ್ಯ ಸಂಸ್ಥೆ ಉಪಾಧ್ಯಕ್ಷೆ ಶ್ರೀಮತಿ ಸರೋಜ ವಿ. ನಾಯ್ಡು, ದಕ್ಷಿಣ ಪ್ರಾಂತೀಯ ಕಛೇರಿಯ ಸಹಾಯಕ ನಿರ್ದೇಶಕ ಶ್ರೀ ಅಮರ ಛೆತ್ರಿ, ಪ್ರಾಂತೀಯ ಸಂಘಟನಾ ಆಯುಕ್ತ ಶ್ರೀ ಅನಲೇಂದ್ರ ಶರ್ಮ ಹಾಗೂ ರಾಜ್ಯ ಪದಾಧಿಕಾರಿಗಳು ಸಮಾರಂಭದಲ್ಲಿ ಉಪಸ್ಥಿತರಿದ್ದರು. ಪ್ರಾರಂಭದಲ್ಲಿ ಶ್ರೀ ಎಂ.ಎ. ಚೆಲ್ಲಯ್ಯ ಜಂಟಿ ರಾಜ್ಯ ಕಾರ್ಯದರ್ಶಿ (ಸ್ಕೌಟ್) ಸ್ವಾಗತಿಸಿದರು. ಕೊನೆಯಲ್ಲಿ ಶ್ರೀಮತಿ ಬಿ.ವಿ. ರಾಮಲತಾ, ಜಂಟಿ ರಾಜ್ಯ ಕಾರ್ಯದರ್ಶಿ (ಗೈಡ್), ವಂದಿಸಿದರು.

ಮಧ್ಯಾಹ್ನ ಹಮ್ಮಿಕೊಂಡಿದ್ದ ಪಥಚಲನವನ್ನು ರಾಜ್ಯ ಸಂಸ್ಥೆ ಉಪಾಧ್ಯಕ್ಷೆ ಶ್ರೀಮತಿ ಸರೋಜ ವಿ. ನಾಯ್ಡು ಅವರು ಉದ್ಘಾಟಿಸಿದರು. ಪಥಚಲನೆ ನಂತರ ಭಾಷಣ ಸ್ಪರ್ಧೆ, ಚಿತ್ರ ರಚನಾ ಸ್ಪರ್ಧೆ ಮತ್ತು ಪ್ರಬಂಧ ಸ್ಪರ್ಧೆಗಳನ್ನು ಏರ್ಪಡಿಸಲಾಗಿತ್ತು. ವಿಜೇತರಿಗೆ ಬಹುಮಾನಗಳನ್ನು ನೀಡಲಾಯಿತು.

ಬೆಂಗಳೂರು ಉತ್ತರ ಮತ್ತು ದಕ್ಷಿಣ ಜಿಲ್ಲೆಗಳಿಂದ ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್, ದಳನಾಯಕ-ದಳನಾಯಕಿಯರು ಮತ್ತು ಜಿಲ್ಲಾ ಪದಾಧಿಕಾರಿಗಳು ಈ ಸಮಾರಂಭದಲ್ಲಿ ಭಾಗವಹಿಸಿದ್ದರು.

## ಕೊಂಡಜ್ಜಿ ರಾಜ್ಯ ತರಬೇತಿ ಕೇಂದ್ರದಲ್ಲಿ ರಾಜ್ಯ ಪುರಸ್ಕಾರ ಸ್ಕೌಟ್ಸ್‌ಗಳ ಪರೀಕ್ಷಾ ಶಿಬಿರ

ದಿನಾಂಕ 18-06-2014 ರಿಂದ 22-06-2014 ರ ವರೆಗೆ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ಕೊಂಡಜ್ಜಿ, ಹರಿಹರ ತಾಲ್ಲೂಕು, ದಾವಣಗೆರೆ ಜಿಲ್ಲೆಯಲ್ಲಿ ರಾಜ್ಯಮಟ್ಟದ ರಾಜ್ಯ ಪುರಸ್ಕಾರ ಸ್ಕೌಟ್ಸ್‌ಗಳ ಪರೀಕ್ಷಾ ಶಿಬಿರವನ್ನು ಏರ್ಪಡಿಸಲಾಗಿತ್ತು. ಈ ಶಿಬಿರದಲ್ಲಿ 13 ಜಿಲ್ಲೆಗಳಿಂದ ಒಟ್ಟು 419 ಸ್ಕೌಟ್ಸ್‌ಗಳು 52 ಸ್ಕೌಟ್ ಮಾಸ್ಟರ್‌ಗಳು ಭಾಗವಹಿಸಿದ್ದರು.

ಧಾರವಾಡ, ಕಾರವಾರ, ಬಳ್ಳಾರಿ, ಶಿರಸಿ, ಬೆಳಗಾವಿ, ದಾವಣಗೆರೆ, ಕೊಪ್ಪಳ, ಚಿಕ್ಕಮಗಳೂರು, ಹಾಸನ, ಹಾವೇರಿ, ರಾಯಚೂರು, ಶಿವಮೊಗ್ಗ, ಚಿತ್ರದುರ್ಗ ಜಿಲ್ಲೆಗಳ ಅಭ್ಯರ್ಥಿಗಳು ಭಾಗವಹಿಸಿದ್ದರು.

ಶಿಬಿರದ ಮೇಲ್ವಿಚಾರಣೆ ಹಾಗೂ ನಾಯಕರಾಗಿ ಶ್ರೀ ಟಿ.ಎ. ಮಂಜುನಾಥಾಚಾರ್, ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್)ಕಾರ್ಯ ನಿರ್ವಹಿಸಿದರು. ಶ್ರೀ ಕೆ.ಎಸ್. ಪ್ರತಿಮ್‌ಕುಮಾರ್, ಶ್ರೀ ಬಿ.ಡಿ. ಫರ್ನಾಂಡೀಸ್, ಶ್ರೀ ಷರಾಫ್ ಮಾದಪ್ಪ, ಶ್ರೀ ಆನಂದ ಅಡಿಗ, ಶ್ರೀ ಕೊಗ್ಗ ಗಾಣಿಗ, ಶ್ರೀ ಶಿವಶಂಕರಪ್ಪ, ಶ್ರೀ ಎಸ್.ಎನ್. ಗೋಪಾಲಕೃಷ್ಣ, ಶ್ರೀ ಬಿ.ಎನ್. ಕಿರಣ್ ಕುಮಾರ್ ರವರು ಪರೀಕ್ಷಾ ತಂಡದ ಸದಸ್ಯರಾಗಿ ಮತ್ತು ಶ್ರೀ ಕೆ.ಬಿ. ಮಲ್ಲೇಶಪ್ಪ, ಊಟೋಪಚಾರದ ವ್ಯವಸ್ಥೆಯನ್ನು ನೋಡಿಕೊಂಡರು.

ಸಮವಸ್ತ್ರ, ನಿಯಮ ಮತ್ತು ಪ್ರತಿಜ್ಞೆ, 4 ಬಂಧಗಳು, ಪ್ರಾರ್ಥನೆ, ಧ್ವಜಗೀತೆ, ರಾಷ್ಟ್ರಗೀತೆ ಮತ್ತು ಧ್ವಜಗಳು, ನಕ್ಷೆ, ಅಗ್ರಗಾಮಿತ್ವ, ಶಿಬಿರವಾಸ, ಪ್ರಥಮ ಚಿಕಿತ್ಸೆ, ಅಂದಾಜಿಸುವುದು, ಲಾಗ್ ಪುಸ್ತಕ, ಪದಕ ಪಡೆದ ಅನುಭವ, ಪ್ರಾವೀಣ್ಯತಾ ಪದಕಗಳ ಪ್ರಮಾಣ ಪತ್ರಗಳನ್ನು ಪರೀಕ್ಷಿಸಲಾಯಿತು.

ದಿನಾಂಕ 20-06-2014 ರಂದು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ನವರು ಶಿಬಿರದಲ್ಲಿ ಭಾಗವಹಿಸಿ ಸ್ಕೌಟ್ಸ್ ಮತ್ತು ಸ್ಕೌಟರ್ಸ್‌ಗಳನ್ನುದ್ದೇಶಿಸಿ ಮಾತನಾಡಿದರು.

ದಿನಾಂಕ 22-06-2014 ರಂದು ಬೆಳಗ್ಗೆ 7 ಗಂಟೆಗೆ ಸರ್ವಧರ್ಮ ಪ್ರಾರ್ಥನೆ ಮಧ್ಯಾಹ್ನ 12-30 ಗಂಟೆ ವರೆಗೆ ಉಳಿದ ವಿಷಯಗಳ ಬಗ್ಗೆ ಪರೀಕ್ಷೆ ಮುಂದುವರೆದಿತ್ತು, 3.00 ಗಂಟೆಗೆ ಧ್ವಜ ಅವರೋಹಣದೊಂದಿಗೆ ಶಿಬಿರವು ಮುಕ್ತಾಯವಾಯಿತು.

# ಜಿಲ್ಲಾ ವಾರ್ತೆಗಳು.................

## ಉಡುಪಿ

ದಿನಾಂಕ 05-06-2014 ರಂದು ಮಾಲಿನ್ಯ ನಿಯಂತ್ರಣ ಮಂಡಳಿ, ಉಡುಪಿ ಮತ್ತು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್- ಜಿಲ್ಲಾ ಸಂಸ್ಥೆ, ಉಡುಪಿ ಇವರ ಸಂಯುಕ್ತಾಶ್ರಯದಲ್ಲಿ ಮಾಲಿನ್ಯ ನಿಯಂತ್ರಣ ಮಂಡಳಿ, ಕಛೇರಿ ಆವರಣದಲ್ಲಿ ವಿಶ್ವ ಪರಿಸರ ದಿನಾಚರಣೆಯನ್ನು ಆಚರಿಸಲಾಯಿತು. ಕಾರ್ಯಕ್ರಮವು ಶ್ರೀ ಎಂ. ಅಕ್ಬರ್, ಅರಣ್ಯ ಉಪ ಸಂರಕ್ಷಣಾಧಿಕಾರಿಗಳು, ಉಡುಪಿ ಇವರ ಅಧ್ಯಕ್ಷತೆಯಲ್ಲಿ ನಡೆಯಿತು. ಇವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಗಿಡಮರಗಳನ್ನು ಬೆಳೆಸಿ ಪರಿಸರವನ್ನು ಸಂರಕ್ಷಿಸಬೇಕೆಂದು ವಿದ್ಯಾರ್ಥಿಗಳಿಗೆ ಹಿತವಚನ ನೀಡಿದರು. ಮುಖ್ಯ ಅತಿಥಿಗಳಾಗಿ ಶ್ರೀ ರವೀಂದ್ರ, ಪ್ರಾದೇಶಿಕ ನಿರ್ದೇಶಕರು (ಪರಿಸರ), ಇವರು ಮಾತನಾಡಿ ಈ ಸಾಲಿನ ವಿಶ್ವ ಪರಿಸರ ದಿನಾಚರಣೆಯ ಧ್ಯೇಯ ವಾಕ್ಯವಾದ "ಈಗ ನಿಮ್ಮ ಧ್ವನಿ ಏರಿಸಿ, ಸಮುದ್ರ ಮಟ್ಟವನ್ನಲ್ಲ" ಎಂಬ ಬಗ್ಗೆ ಮಾಹಿತಿ ನೀಡಿದರು. ಅತಿಥಿಗಳು ವಿದ್ಯಾರ್ಥಿಗಳಿಗೆ ಗಿಡಗಳನ್ನು ನೀಡುವ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಕೆ.ಬಿ. ರಾವ್, ಜಿಲ್ಲಾ ಆಯುಕ್ತ (ಸ್ಕೌಟ್ಸ್) ಶ್ರೀ ಎಡ್ವಿನ್ ಆಳ್ವ, ಜಿಲ್ಲಾ ಕಾರ್ಯದರ್ಶಿ, ಶ್ರೀ ಶೇಖರ್ ಪೂಜಾರಿ, ಜಿಲ್ಲಾ ಸ್ಥಾನೀಯ ಆಯುಕ್ತರುಗಳಾದ ಶ್ರೀ ರಾಜಗೋಪಾಲ ಆಚಾರ್ಯ, ಶ್ರೀ ಬಿ. ಆನಂದ ಅಡಿಗ ಹಾಗೂ ಅರಣ್ಯ ಇಲಾಖಾ ಅಧಿಕಾರಿಗಳು ಉಪಸ್ಥಿತರಿದ್ದರು.

ಡಾ. ಗಣೇಶ್, ಪ್ರೊಫೆಸರ್ & ಡೀನ್, ವಾದಿರಾಜ ತಾಂತ್ರಿಕ ವಿದ್ಯಾಲಯ, ಬಂಟಕಲ್ ಇವರು ಪರಿಸರದ ಬಗ್ಗೆ ವಿಶೇಷ ಉಪನ್ಯಾಸ ನೀಡಿದರು. ಶ್ರೀ ರಾಜಶೇಖರ ಪುರಾಣಿಕ ಪರಿಸರಾಧಿಕಾರಗಳು, ಎಲ್ಲರನ್ನು ಸ್ವಾಗತಿಸಿ ಪ್ರಾಸ್ತಾವಿಕ ಭಾಷಣ ಮಾಡಿದರು. ರಾಜ್ಯ ಸಹಾಯಕ ಸಂಘಟನಾ ಆಯುಕ್ತ (ಸ್ಕೌಟ್), ಶ್ರೀ ಎಂ. ಪ್ರಭಾಕರ್ ಭಟ್ ಧನ್ಯವಾದ ನೀಡಿದರು. 125 ಸ್ಕೌಟ್-ಗೈಡ್ಸ್‌ಗಳು ಭಾಗವಹಿಸಿದ್ದರು. ವಿಶ್ವ ಪರಿಸರ ದಿನಾಚರಣೆ ಪ್ರಯುಕ್ತ ಭಿತ್ತಿ ಚಿತ್ರ ಹಾಗೂ ಘೋಷಣೆಗಳ ಸ್ಪರ್ಧೆಯಲ್ಲಿ ವಿಜೇತರಾದ ಸ್ಕೌಟ್ಸ್-ಗೈಡ್ಸ್‌ಗಳಿಗೆ ಬಹುಮಾನ ನೀಡಲಾಯಿತು.

## ರಾಯಚೂರು

ಸಮಾಜದಲ್ಲಿ ಪ್ರತಿಯೊಬ್ಬರೂ ವಿದ್ಯಾವಂತರಾಗಿ ಪ್ರಜ್ಞಾವಂತಿಕೆಯಿಂದ ಪರಿಸರ ನಾಶವಾಗದಂತೆ ಎಚ್ಚರಿಕೆಯಿಂದ ಜೀವನ ಸಾಗಿಸಬೇಕು. ನಾವು ಎಷ್ಟೇ ತಂತ್ರಜ್ಞಾನ ಯುಗದಲ್ಲಿ ಜೀವನ ಸಾಗಿಸಿದರೂ ನಮಗೆ ಜೀವಿಸಲು ಉತ್ತಮವಾದ ಗಾಳಿ, ಬೆಳಕು, ಶುದ್ಧವಾದ ಕುಡಿಯುವ ನೀರು ಹಾಗೂ ಆಹಾರದ ಅವಶ್ಯಕತೆಯಿದೆ. ಇವೆಲ್ಲವು ನಮಗೆ ಸರಳ ರೀತಿಯಲ್ಲಿ ದೊರೆಯಬೇಕಾದರೆ ಪರಿಸರವನ್ನು ನಾವು ಸರಿಯಾಗಿ ಕಾಪಾಡುವುದು ಅತೀ ಅವಶ್ಯಕತೆಯೆಂದು ಸ್ಕೌಟ್ ಮಾಸ್ಟರ್ ಶ್ರೀ ಗಂಗಾಧರಯ್ಯ ಹಿರೇಮಠ ಹೇಳಿದರು.

ಅವರು ರಾಯಚೂರು ಜಿಲ್ಲೆಯ ಸಿಂಧನೂರು ತಾಲೂಕಿನ ಅಂಭಾಮಠ ಸರಕಾರಿ ಪ್ರೌಢಶಾಲೆಯ ಶ್ರೀ ಅಂಬಾದೇವಿ ಇಕೋ ಕ್ಲಬ್ ಮತ್ತು ಸ್ಕೌಟ್ಸ್ ಮತ್ತು ಗೈಡ್ಸ್ ಘಟಕದ ಆಶ್ರಯದಲ್ಲಿ ಗುರುವಾರ ಹಮ್ಮಿಕೊಂಡಿದ್ದ ವಿಶ್ವ ಪರಿಸರ ದಿನಾಚರಣೆಯ ಅಂಗವಾಗಿ "ಹಸಿರು ಹಬ್ಬ" ಕಾರ್ಯಕ್ರಮದಲ್ಲಿ ಮಾತನಾಡಿದರು.

ಅಧ್ಯಕ್ಷತೆಯನ್ನು ವಹಿಸಿದ್ದ ಶಿಕ್ಷಕ ಶ್ರೀ ಸಂಗಮೇಶ ಕೋಟೆ ಮಾತನಾಡಿ ಜನಸಾಮಾನ್ಯರಿಗೆ ಪರಿಸರ ರಕ್ಷಣೆಯ ಬಗ್ಗೆ ತಿಳುವಳಿಕೆ ಕೊಡುವ ಕಾರ್ಯಕ್ರಮವಾಗಬೇಕು. ಪರಿಸರ ರಕ್ಷಣೆ ಮಾಡುವುದು ನಮ್ಮೆಲ್ಲರ ಜವಾಬ್ದಾರಿಯಾಗಿದೆಯೆಂದರು. ಶಿಕ್ಷಕ ಶ್ರೀ ಬೀರಪ್ಪ ಶಂಭೋಜಿ ಪರಿಸರದ ಕುರಿತು ಕವನಗಳ ವಾಚನ ಮಾಡಿದರು. ಶಾಲಾ ಶಿಕ್ಷಕ-ಶಿಕ್ಷಕಿಯರು ಉಪಸ್ಥಿತರಿದ್ದರು.

************

ದಿನಾಂಕ 05-06-2014 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಹಾಗೂ ಕಾಕತೀಯ ಶಿಕ್ಷಣ ಸಂಸ್ಥೆಗಳು ಹಮ್ಮಿಕೊಂಡ "ವಿಶ್ವ ಪರಿಸರ" ದಿನಾಚರಣೆಯಲ್ಲಿ ಪರಿಸರ ರಕ್ಷಣೆ ಪ್ರತಿಯೊಬ್ಬ ನಾಗರಿಕನ ಹೊಣೆ ಎಂದು ಶ್ರೀ ಬಸವರಾಜು ಬೊರಡ್ಡಿ, ಜಿಲ್ಲಾ ದೈಹಿಕ ಶಿಕ್ಷಣಾಧಿಕಾರಿಗಳು ಅಭಿಪ್ರಾಯಪಟ್ಟರು. ಸಸಿಗೆ ನೀರು ಹಾಕುವುದುರ ಮೂಲಕ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದರು.

ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಶ್ರೀ ಎಮ್. ಮಧು ಮಾತನಾಡಿ, ಸಂಸ್ಥೆಯು ಹಮ್ಮಿಕೊಳ್ಳುವ ಪ್ರತಿಯೊಂದು ಕಾರ್ಯಕ್ರಮಗಳು ಜನರಲ್ಲಿ ಅರಿವು ಮೂಡಿಸುವ ಕಾರ್ಯಕ್ರಮಗಳಾಗುತ್ತಿವೆ. ಮಕ್ಕಳಲ್ಲಿ ಸೇವಾ ಮನೋಭಾವ ಬೆಳೆಸುವ ಜೊತೆಗೆ ಅವರಲ್ಲಿ ಪರಿಸರದ ಪ್ರಜ್ಞೆ ಬೆಳೆಸಲಾಗುತ್ತಿದೆ ಎಂದು ಹೇಳಿದರು. ಪರಿಸರ ದಿನಾಚರಣೆಯ ನಿಮಿತ್ತವಾಗಿ ಜಿಲ್ಲಾ ಸಂಸ್ಥೆಯು, ಸ್ಕೌಟ್ಸ್ & ಗೈಡ್ಸ್‌ಗಳಿಗೆ ಪ್ರಬಂಧ ಸ್ಪರ್ಧೆ ಹಾಗೂ ಚಿತ್ರ ಕಲಾಸ್ಪರ್ಧೆಗಳನ್ನು ಏರ್ಪಡಿಸಲಾಗಿತ್ತು. ನಂತರ ವಿಜೇತರಿಗೆ ಬಹುಮಾನ ಹಾಗೂ ಪ್ರಶಸ್ತಿ ಪತ್ರ ನೀಡಿ ಗೌರವಿಸಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಕೆ. ತಿಮ್ಮಯ್ಯ, ಜಿಲ್ಲಾ ಮುಖ್ಯ ಆಯುಕ್ತರು ವಹಿಸಿಕೊಂಡು ಮಾತನಾಡಿ, ಪ್ರತಿಯೊಬ್ಬರು ತಮ್ಮ ಸುತ್ತಲಿನ ಪರಿಸರವನ್ನು ಸ್ವಚ್ಛವಾಗಿಟ್ಟುಕೊಳ್ಳುವ ಮೂಲಕ ಪರಿಸರದ ಕಾಳಜಿಯನ್ನು ತೋರಿಸಬೇಕು ಎಂದರು.

ಶ್ರೀಮತಿ ಅಜೀಜಾ ಸುಲ್ತಾನ, ಜಿಲ್ಲಾ ಆಯುಕ್ತರು (ಗೈಡ್ಸ್) ಎಲ್ಲರನ್ನು ಸ್ವಾಗತಿಸಿ ಪ್ರಾಸ್ತಾವಿಕವಾಗಿ ಮಾತನಾಡಿದರು. ಈ ಸಂದರ್ಭದಲ್ಲಿ ಶ್ರೀ ಗೋವಿಂದರಾಜು. ಎಸ್. ಅಧ್ಯಕ್ಷರು ಸ್ಥಳೀಯ ಸಂಸ್ಥೆ ರಾಯಚೂರು, ಶ್ರೀಮತಿ ರತ್ನಮಾಲಾ ಕಾರ್ಯದರ್ಶಿಗಳು ಕಾಕತೀಯ ಶಾಲೆ, ಶ್ರೀ ಆರ್. ಹೆಚ್. ಸಾಗರ, ಕಾರ್ಯದರ್ಶಿಗಳು ಸ್ಥಳೀಯ ಸಂಸ್ಥೆ, ಶ್ರೀ ಹನುಮಯ್ಯ ಭೋವಿ ಹಾಗೂ ವಿವಿಧ ಶಾಲೆಯ ಸ್ಕೌಟ್ಸ್ & ಗೈಡ್ಸ್‌ಗಳು ಭಾಗವಹಿಸಿದ್ದರು. ಶ್ರೀ ರಾವುತರಾವ್ ಬರೂರ ಜಿಲ್ಲಾ ಸಂಘಟನಾ ಆಯುಕ್ತರು ಕಾರ್ಯಕ್ರಮ ಸಂಘಟಿಸಿದರು. ಶ್ರೀಮತಿ ಪದ್ಮಶ್ರೀ ಮುಖ್ಯೋಪಾಧ್ಯಾನಿಯರು ಎಲ್ಲರನ್ನು ವಂದಿಸಿದರು. ನಂತರದಲ್ಲಿ ಶಾಲಾ ಆವರಣದಸಲ್ಲಿ ಸಸಿಗಳನ್ನು ನೆಡಲಾಯಿತು.

************

ದಿನಾಂಕ 14-06-2014 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ರಾಯಚೂರು ವತಿಯಿಂದ ನೂತನವಾಗಿ ಕರ್ನಾಟಕ ರಾಜ್ಯ ವಿಧಾನ ಸಭೆಯಿಂದ ವಿಧಾನ ಪರಿಷತ್ತಿಗೆ ನಡೆದ ಚುನಾವಣೆಯಲ್ಲಿ ಅವಿರೋಧವಾಗಿ ಆಯ್ಕೆಯಾಗಿ ಪ್ರಥಮ ಬಾರಿಗೆ ರಾಯಚೂರು ನಗರಕ್ಕೆ ಆಗಮಿಸಿದ ಶ್ರೀ ಎನ್.ಎಸ್. ಬೋಸ್‌ರಾಜು ಇವರನ್ನು ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯಿಂದ ಆತ್ಮೀಯವಾಗಿ ಬರಮಾಡಿಕೊಂಡು ಅವರಿಗೆ ಹೃತ್ಪೂರ್ವಕವಾದ ಸ್ವಾಗತ ಕೋರಿ ಅಭಿನಂದಿಸಲಾಯಿತು. ಜಿಲ್ಲಾ ಸಂಸ್ಥೆಯ ಸರ್ವತೋಮುಖ ಅಭಿವೃದ್ಧಿಗಾಗಿ ರಾಯಚೂರು ಜಿಲ್ಲೆಯ ಸ್ಕೌಟ್ಸ್-ಗೈಡ್ಸ್‌ಗಳ ಹಿತದೃಷ್ಟಿಯಿಂದ ಅವರ ಸಹಕಾರವನ್ನು ಕೋರಲಾಗಿದೆ. ಈ ಸಂದರ್ಭದಲ್ಲಿ ಶ್ರೀ ಕೆ. ತಿಮ್ಮಯ್ಯ, ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಶೇಷಗಿರಿರಾವ್ ಕುಲಕರ್ಣಿ ಜಿಲ್ಲಾ ಆಯುಕ್ತರು (ಸ್ಕೌಟ್), ಶ್ರೀಮತಿ ಅಜಿಜಾ ಸುಲ್ತಾನ್ ಜಿಲ್ಲಾ ಆಯುಕ್ತರು (ಗೈಡ್), ಶ್ರೀ ಅಮರೇಗೌಡ ಪಾಟೀಲ್ ಕಾರ್ಯದರ್ಶಿಗಳು, ಶ್ರೀ ಹೆಚ್. ಹನುಮಂತಪ್ಪ ಕೋಶಾಧಿಕಾರಿಗಳು, ಶ್ರೀಮತಿ ಆಲಿಯಾಖಾನಂ, ಜಂಟಿ ಕಾರ್ಯದರ್ಶಿಗಳು, ಶ್ರೀ ಆರ್.ಎಚ್. ಸಾಗರ್, ಶ್ರೀ ರಾವುತರಾವ್ ಬರೂರ್ ಜಿಲ್ಲಾ ಸಂಘಟನಾ ಆಯುಕ್ತರು ಉಪಸ್ಥಿತರಿದ್ದರು.

## ಚಿತ್ರದುರ್ಗ

ದಿನಾಂಕ 05-06-2014 ರಂದು ಜಿಲ್ಲಾ ಕಾನೂನು ಸೇವೆಗಳ ಪ್ರಾಧಿಕಾರ, ಜಿಲ್ಲಾ ವಕೀಲರ ಸಂಘ, ಚೈತ್ರ ಸಾಹಸ ಅಕಾಡೆಮಿ, ಅರಣ್ಯ ಇಲಾಖೆ, ಸಾರ್ವಜನಿಕ ಶಿಕ್ಷಣ ಇಲಾಖೆ, ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಹಾಗೂ ಶ್ರೀ ವಿದ್ಯಾ ವಿಕಾಸ ವಿದ್ಯಾ ಸಂಸ್ಥೆ, ಚಿತ್ರದುರ್ಗ ಇವರುಗಳ ಸಂಯುಕ್ತಾಶ್ರಯದಲ್ಲಿ ವಿಶ್ವ ಪರಿಸರ ದಿನಾಚರಣೆಯನ್ನು ಹಮ್ಮಿಕೊಳ್ಳಲಾಗಿತ್ತು.

ಈ ಸಂದರ್ಭದಲ್ಲಿ ನಗರದ ಪ್ರಮುಖ ಬೀದಿಗಳಲ್ಲಿ ಪರಿಸರ ಜಾಗೃತಿ ಜಾಥಾ ನಡೆಯಿತು. ನಂತರ ಕಾರ್ಯಕ್ರಮವು ಶ್ರೀ ಹೆಚ್.ಎ. ಮೋಹನ್ ಗೌರವ ಪ್ರಧಾನ ಹಿರಿಯ ಸಿವಿಲ್ ನ್ಯಾಯಾಧೀಶರು ಮತ್ತು ಸದಸ್ಯ ಕಾರ್ಯದರ್ಶಿ ಜಿ.ಕಾ.ಸೇ.ಪ್ರಾ. ಚಿತ್ರದುರ್ಗ ಇವರ ಅಧ್ಯಕ್ಷತೆಯಲ್ಲಿ ಶ್ರೀ ವಿ.ಪಿ. ಇಕ್ಕೇರಿ, ಭಾ.ಆ.ಸೇ. ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಚಿತ್ರದುರ್ಗ ಇವರಿಂದ ಉದ್ಘಾಟಿಸಲ್ಪಟ್ಟಿತು.

ಶ್ರೀಮತಿ ಮಂಜುಶ್ರೀ ಭಾ.ಆ.ಸೇ., ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿಗಳು ಜಿಲ್ಲಾ ಪಂಚಾಯತ್ ಚಿತ್ರದುರ್ಗ, ಶ್ರೀ ಹೆಚ್. ಮಂಜುನಾಥ ಉಪ-ನಿರ್ದೇಶಕರು (ಆ) ಸಾ.ಶಿ.ಇ. ಹಾಗೂ ಜಿಲ್ಲಾ ಮುಖ್ಯ ಆಯುಕ್ತರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಚಿತ್ರದುರ್ಗ, ಶ್ರೀ ವಿಜಯಕುಮಾರ ಕಾರ್ಯದರ್ಶಿ ಶ್ರೀ ವಿದ್ಯಾ ವಿಕಾಸ ವಿದ್ಯಾ ಸಂಸ್ಥೆ ಚಿತ್ರದುರ್ಗ, ಶ್ರೀ ಕೆ. ಚಂದ್ರಶೇಖರ ನಾಯಕ, ಕ.ಆ.ಸೇ. ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಅ.ಇ. ಚಿತ್ರದುರ್ಗ ಶ್ರೀ ಕೆ.ಆರ್. ದೇವರಾಜು ಉಪ-ನಿರ್ದೇಶಕರು ತೋಟಗಾರಿಕಾ ಇಲಾಖೆ, ಚಿತ್ರದುರ್ಗ ಶ್ರೀ ಸಿ.ಬಿ. ನಟರಾಜ, ಜಿಲ್ಲಾ ಅಧ್ಯಕ್ಷರು, ವಕೀಲರ ಸಂಘ ಚಿತ್ರದುರ್ಗ, ಶ್ರೀ ಬಿ. ರವಿಶಂಕರ ರೆಡ್ಡಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಚಿತ್ರದುರ್ಗ, ಶ್ರೀ ಎಂ.ಹೆಚ್. ಜಯಣ್ಣ ಜಿಲ್ಲಾ ದೈಹಿಕ ಶಿಕ್ಷಣಾಧಿಕಾರಿ ಚಿತ್ರದುರ್ಗ. ಶ್ರೀಮತಿ ಹೇಮಂತಿನಿ ಪ್ರಕಾಶ, ಜಿಲ್ಲಾ ಗೈಡ್ಸ್ ಆಯುಕ್ತರು ಚಿತ್ರದುರ್ಗ, ಶ್ರೀಮತಿ ರೀನಾ ವೀರಭದ್ರಪ್ಪ, ಸಹ ಕಾರ್ಯದರ್ಶಿ, ಶ್ರೀ ನಾಗೇಶ ಆರ್. ಶಿವಾಪೂರ ಸಹಾಯಕ ರಾಜ್ಯ ಸಂಘಟನಾ ಆಯುಕ್ತರು ಸ್ಕೌಟ್ಸ್ ಚಿತ್ರದುರ್ಗ, ಕಾರ್ಯಕ್ರಮಗಳಲ್ಲಿ ಉಪಸ್ಥಿತರಿದ್ದರು.

ಜಿಲ್ಲಾ ಸಂಸ್ಥೆ ಏರ್ಪಡಿಸಿದ್ದ ಪ್ರಬಂಧ, ಭಾಷಣ, ಚಿತ್ರಕಲಾ ಸ್ಪರ್ಧೆಗಳಲ್ಲಿ ವಿಜೇತರಾದ ಕಬ್ ಮತ್ತು ಬುಲ್ ಬುಲ್ ಹಾಗೂ ಸ್ಕೌಟ್ಸ್ & ಗೈಡ್ಸ್‌ಗಳಿಗೆ ಬಹುಮಾನಗಳನ್ನು ವಿತರಿಸಲಾಯಿತು.

**************

ದಿನಾಂಕ 09-06-2014 ರಂದು ಶ್ರೀ ಹೆಚ್. ಮಂಜುನಾಥ, ಉಪ ನಿರ್ದೇಶಕರು(ಆ) ಸಾ.ಶಿ. ಇಲಾಖೆ ಹಾಗೂ ಜಿಲ್ಲಾ ಮುಖ್ಯ ಆಯುಕ್ತರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಚಿತ್ರದುರ್ಗ ಇವರ ಅಧ್ಯಕ್ಷತೆಯಲ್ಲಿ ಚಿತ್ರದುರ್ಗ ಜಿಲ್ಲಾ ದೈಹಿಕ ಶಿಕ್ಷಣಾಧಿಕಾರಿಗಳಾದ ಶ್ರೀ ಜಯಣ್ಣರವರು ಜಿಲ್ಲೆಯ ಆರು ತಾಲೂಕುಗಳ ದೈಹಿಕ ಶಿಕ್ಷಣ ವಿಷಯ ಪರಿವೀಕ್ಷಕರುಗಳಿಗೆ ಕ್ರೀಡೆಯ ಬೆಳವಣಿಗೆ ಹಾಗೂ ಸ್ಕೌಟ್ಸ್ ಮತ್ತು ಗೈಡ್ಸ್, ಆಂಧೋಲನವನ್ನು ಜಿಲ್ಲೆಯಲ್ಲಿ ಬಲಪಡಿಸುವ ಬಗ್ಗೆ ಸಭೆ ನಡೆಸಿದರು. ಚಿತ್ರದುರ್ಗ, ಹೊಳ್ಕೆರೆ, ಹೊಸದುರ್ಗ, ಹಿರಿಯೂರು. ಮೊಳಕಾಲ್ಮೂರು ಹಾಗು ಚಳ್ಳೆಕೆರೆ ತಾಲ್ಲೂಕು ದೈಹಿಕ ಶಿಕ್ಷಣ ಅಧಿಕಾರಿಗಳು ಹಾಗೂ ಚಿತ್ರದುರ್ಗ ಸ್ಕೌಟ್ಸ್ ಮತ್ತು ಗೈಡ್ಸ್, ಸಂಘಟಕರು ಉಪಸ್ಥಿತರಿದ್ದರು.

## ಕೊಪ್ಪಳ

ದಿನಾಂಕ 05-06-2014 ರಂದು ವಿಶ್ವಪರಿಸರ ದಿನಾಚರಣೆಯನ್ನು ಸರಸ್ವತಿ ವಿದ್ಯಾ ಮಂದಿರ ಶಾಲೆಯಲ್ಲಿ ಆಚರಿಸಲಾಯಿತು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಎ.ಹೆಚ್. ಅತ್ತನೂರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀಮತಿ ರೇಣುಕಾ ಅತ್ತನೂರ, ಶ್ರೀ ಶಿವಬಸವನಗೌಡ ಪಾಟೀಲ ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆಯ ಖಜಾಂಚಿಗಳು ಹಾಗು ಶಾಲೆಯ ಸ್ಕೌಟ್ ಮಾಸ್ಟರ್ ಶ್ರೀ ರೇವಯ್ಯ ಮತ್ತು ಸಿಬ್ಬಂಧಿಯವರು ಭಾಗವಹಿಸಿದ್ದರು.

*************

ದಿನಾಂಕ 13-06-2014 ರಿಂದ 15-06-014 ರ ವರೆಗೆ ರಾಜ್ಯ ಪುರಸ್ಕಾರ ಪೂರ್ವಬಾವಿ ತರಬೇತಿ ಶಿಬಿರವನ್ನು ಸರಕಾರಿ ಪ್ರೌಢಶಾಲೆ (ಬನ್ನಿಕಟ್ಟಿ) ಕೊಪ್ಪಳದಲ್ಲಿ ನಡೆಸಲಾಯಿತು.

ಸ್ಕೌಟ್ ವಿಭಾಗಕ್ಕೆ ಶ್ರೀ ಎ. ಎರ್ರಣ್ಣ, ಡಿ.ಟಿ.ಸಿ., ಹಾಗೂ ಎ.ಎಲ್.ಟಿ.(ಎಸ್). ಗೈಡ್ ವಿಭಾಗಕ್ಕೆ ಶ್ರೀಮತಿ ಸರೋಜ ನಾಯಕತ್ವ ವಹಿಸಿದ್ದರು. ಪ್ರವೇಶದಿಂದ ರಾಜ್ಯ ಪುರಸ್ಕಾರದ ವರೆಗಿನ ಜ್ಞಾನವನ್ನು ಸ್ಕೌಟ್-ಗೈಡ್ಸ್ ಗಳಿಗೆ ನೀಡಲಾಯಿತು. ಈ ಶಿಬಿರದ ಮುಖ್ಯ ಅತಿಥಿಗಳಾಗಿ ಬಾನಿಕಟ್ಟೆಯ ಮುಖ್ಯ ಗುರುಗಳು ಭಾಗವಹಿಸಿದ್ದರು.

## ಕೊಡಗು

ಪರಿಸರ ಸಮತೋಲನ ಕಾಯ್ದುಕೊಳ್ಳಲು ಪ್ರತಿಯೊಬ್ಬರೂ ಗಮನಹರಿಸಬೇಕು. ಅರಣ್ಯ ನಾಶ ತಡೆಯಬೇಕು. ಹಾಗೆಯೇ ಮರ ಗಿಡಗಳನ್ನು ಯಥೇಚ್ಚವಾಗಿ ಬೆಳೆಸಬೇಕು. ಇದರಿಂದ ಪರಿಸರ ಸಮತೋಲನ ಕಾಣಲು ಸಾಧ್ಯ ಎಂದು ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶ ಶ್ರೀ ಚಂದ್ರಶೇಖರ ಹಿಪ್ಪರಗಿ ಅಭಿಪ್ರಾಯಪಟ್ಟರು.

ಜಿಲ್ಲಾ ಕಾನೂನು ಸೇವಾ ಪ್ರಾಧಿಕಾರ, ಸಾರ್ವಜನಿಕ ಶಿಕ್ಷಣ ಇಲಾಖೆ, ಅರಣ್ಯ ಇಲಾಖೆ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ, ಕರ್ನಾಟಕ ರಾಜ್ಯ ಪರಿಸರ ಮಾಲಿನ್ಯ ನಿಯಂತ್ರಣ ಮಂಡಳಿ, ಒಡಿಪಿ ಸಂಸ್ಥೆ, ಮಹಿಳೋದಯ ಮಹಿಳಾ ಒಕ್ಕೂಟ ಹಾಗ್ಯೆ ವೈ.ಎಂ.ಸಿ.ಎ., ಸಹಯೋಗದಲ್ಲಿ ಗುರುವಾರ ನಗರದಲ್ಲಿ ವಿಶ್ವ ಪರಿಸರ ದಿನಾಚರಣೆ ಉದ್ಘಾಟಿಸಿ ಅವರು ಮಾತನಾಡಿದರು.

ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಕೆ.ಟಿ. ಬೇಬಿಮ್ಯಾಥ್ಯೂ ಮಾತನಾಡಿ, ಪರಿಸರದ ಮಹತ್ವ ಜಾಗೃತಿ ಕುರಿತು ಉತ್ತಮ ಪರಿಸರ ಹೊಂದಿರುವ ಶಾಲೆಗಳಿಗೆ ಪರಿಸರ ಮಿತ್ರ ಶಾಲೆ ಪ್ರಶಸ್ತಿಯನ್ನು ನೀಡುತ್ತಾ ಬರಲಾಗಿದೆ ಎಂದು ತಿಳಿಸಿದರು.

ಬಳಿಕ ನಗರದ ಕಾವೇರಿ ಕಲಾ ಕ್ಷೇತ್ರದಲ್ಲಿ ನಡೆದ ಸಭಾ ಕಾರ್ಯಕ್ರಮದಲ್ಲಿ ಗಿಡಕ್ಕೆ ನೀರು ಹಾಕುವ ಮೂಲಕ ಜಾಥಕ್ಕೆ ಚಾಲನೆ ನೀಡಿದ ನಗರಸಭಾ ಅಧ್ಯಕ್ಷೆ ಶ್ರೀಮತಿ ಜುಲೇಕಾಬಿ ಮಾತನಾಡಿ, ಮಡಿಕೇರಿ ನಗದಲ್ಲಿ ಸುಂದರ, ಶುಚಿತ್ವ ಮತ್ತು ಶುದ್ಧ ಪರಿಸರ ಕಾಪಾಡಲು ಎಲ್ಲರೂ ಕೈ ಜೋಡಿಸಬೇಕು ಎಂದರು.

ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ ನಿರ್ದೇಶಕ ಶ್ರೀ ವಿ.ಎಂ. ಕಾಂತರಾಜು, ಮೈಸೂರು ಒಡಿಪಿ ಸಂಸ್ಥೆಯ ಸಂಯೋಜಕ ಶ್ರೀ ಜಯರಾಮ್, ವಲಯ ಅರಣ್ಯಾಧಿಕಾರಿ ಶ್ರೀ ರಂಗಸ್ವಾಮಿ, ಸಂತ ಮೈಕಲರ ಶಾಲೆಯ ಧರ್ಮಗುರು ಶ್ರೀ ಪ್ರಶಾಂತ್, ಒಡಿಪಿ ಸಂಸ್ಥೆಯ ಜಾಯ್ಸ್ ಮೇನೆಜಸ್, ಮಾರ್ಗರೇಟ್ ಪಾಲ್ಗೊಂಡರು. ನ್ಯಾಯಾಲಯ ಇಲಾಖೆಯ ಶ್ರೀ ಜಯಪ್ಪ ನಿರೂಪಿ ರೂಪಿಸಿದರು.

## ಧಾರವಾಡ

ದಿನಾಂಕ 07-06-2014 ರಂದು ಧಾರವಾಡ ಜಿಲ್ಲಾ ಸಂಸ್ಥೆಯ ಆವರಣದಲ್ಲಿ ವಿಶ್ವ ಪರಿಸರ ದಿನಾಚರಣೆಯನ್ನು ಆಚರಿಸಲಾಯಿತು. ಧಾರವಾಡ ಶಹರದ ವಿವಿಧ ಶಾಲೆಗಳಿಂದ ಅಧಿಕ ಸಂಖ್ಯೆಯಲ್ಲಿ ಸ್ಕೌಟ್ಸ್, ಗೈಡ್ಸ್, ಕಬ್ಸ್, ಬುಲ್‌ಬುಲ್‌ಗಳು ಹಾಗೂ ಶಿಕ್ಷಕರು ಭಾಗವಹಿಸಿದರು. ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಡಾ. ಬಿ.ಕೆ.ಎಸ್. ವರ್ಧನ್ ರವರು ಸಸಿಗಳನ್ನು ನೆಡಿಸಲು ಪ್ರೇರಣೆ ನೀಡುತ್ತಾ ಎಲ್ಲರಿಗೂ ಪ್ರತಿಜ್ಞೆಯನ್ನು ಬೋಧಿಸಿದರು. ಸಂಸ್ಥೆಯ ಪದಾಧಿಕಾರಿಗಳಾದ ಶ್ರೀ ವಿ.ವಿ. ಕಟ್ಟಿ, ಶ್ರೀ ಎಸ್.ವಿ. ಮೊರಬ, ಶ್ರೀ ಎಂ.ಎಂ. ಲೋಂಡೆ, ಶ್ರೀ ಬಿ.ಕೆ. ಪಾಟೀಲ, ಶ್ರೀ ಎ.ಪಿ. ಶಿಂಧೆ ಮತ್ತು ಶ್ರೀಮತಿಯರಾದ ಪ್ರಭಾ, ರೂಪಾ ಹಾಗೂ ಶಾಲೆಗಳ ಸ್ಕೌಟ್ ಮಾಸ್ಟರ್ ಮತ್ತು ಗೈಡ್ ಕ್ಯಾಪ್ಟನ್‌ರು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

## ಬಿಜಾಪುರ

ದಿನಾಂಕ 05-06-2014 ರಂದು ಶ್ರೀಮತಿ ವಾಸಂತಿಬಾಯಿ ಜಗಜನ್ನಿ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಮತ್ತು ಶಿಬಿರ ಕೇಂದ್ರ ವಿಜಾಪೂರ – ಬುರಣಾಪೂರದಲ್ಲಿ ಪರಿಸರ ದಿನಾಚರಣೆಯನ್ನು ಹಮ್ಮಿಕೊಳ್ಳಲಾಯಿತು. ಜಿಲ್ಲಾ ತರಬೇತಿ ಸಲಹೆಗಾರರು ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆಯ ವಿಷಯ ಪರಿವೀಕ್ಷಕರಾದ ಶ್ರೀ ನಾಗೇಂದ್ರ ಸಿನ್ನೂರ ಸಸಿ ನೆಟ್ಟು ಮಾತನಾಡಿದರು. "ಕಾಡು ಬೆಳಸಿ ನಾಡು ಉಳಿಸಿ" ಎಂಬ ನಾಣ್ಣುಡಿಯಂತೆ ಪ್ರತಿ ಮಗುವೂ ಪ್ರತಿ ವರ್ಷ ಒಂದು ಗಿಡ ನೆಡುವುದರ ಜೊತೆಗೆ ಅದನ್ನು ಬೆಳೆಸಿ ಪೋಷಿಸಬೇಕು ಎಂದು ಮಕ್ಕಳಿಗೆ ಕಿವಿಮಾತು ಹೇಳಿದರು.

ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಜಗದೀಶ ಬೋಳಸೂರ ಮಾತನಾಡಿ ಜಿಲ್ಲಾ ತರಬೇತಿ ಕೇಂದ್ರದಲ್ಲಿ ಈಗಾಗಲೇ ಸುಮಾರು 700 ಗಿಡಗಳನ್ನು ನೆಟ್ಟಿದ್ದು ಮತ್ತು ಅವುಗಳ ರಕ್ಷಣೆಗೆ ಸತತ ಪರಿಶ್ರಮಪಟ್ಟು ಪೋಷಿಸುವ ಕಾರ್ಯ ನಿರಂತರವಾಗಿ ನಡೆದಿದ್ದು ಮುಂಬರುವ ದಿನಗಳಲ್ಲಿ ಸುಮಾರು 1000 ಹಣ್ಣಿನ ಗಿಡಗಳು ನೆಡುವ ಕಾರ್ಯಕ್ರಮವಿದೆ ಎಂದು ಹೇಳಿದರು. ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಸುನೀಲ ಬಿರಾದಾರ ಪಾಟೀಲ ಸಂಘಟನೆ ಮಾಡಿದರು. ನಗರದ ಸೇಂಟ್ ಜೋಸೆಪ್ ಪ್ರೌಢಶಾಲೆಯ ಲೇಡಿ ಸ್ಕೌಟ್ಸ್ ಮಾಸ್ಟರ್ ಶ್ರೀಮತಿ ಜಿ.ಆರ್. ಬಿಸನಾಳ, 32 ಸ್ಕೌಟ್ಸ್, 32 ಗೈಡ್ಸ್‌ಗಳು ಮತ್ತು ಶ್ರೀ ಬಿ.ಹೆಚ್. ಹೂಗಾರ ಸ್ಕೌಟ್ಸ್ ಮಾಸ್ಟರ್ ಇವರು ಉಪಸ್ಥಿತರಿದ್ದರು.

***********

ದಿನಾಂಕ 15-06-2014 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಹಾಗು ಸೇಂಟ್ ಜೊಸೆಪ್ ಶಾಲೆ ವಿಜಾಪೂರ ಇವರ ಸಂಯುಕ್ತಾಶ್ರಯದಲ್ಲಿ ವಿಜಾಪೂರ ನಗರದ ರೈಲು ನಿಲ್ದಾಣದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಸೇವೆ ಸಲ್ಲಿಸಿದರು. ರೈಲು ನಿಲ್ದಾಣದ ವ್ಯವಸ್ಥಾಪಕರ ಅನುಮತಿ ಪಡೆದು ರೈಲು ಹಳಿಗಳ ಮಧ್ಯದಲ್ಲಿ ಬಿದ್ದ ಕಸ, ಪೇಪರ್, ಪ್ಲಾಸ್ಟಿಕ್ ಎಲ್ಲವನ್ನೂ ಒಂದು ಕಸದ ಬುಟ್ಟಿಯಲ್ಲಿ ಹಾಕಿಕೊಂಡು ಒಂದು ಕಡೆ ಕೂಡಿ ಹಾಕಿದ್ದರು. ರೈಲು ನಿಲ್ದಾಣದ ಆರ್.ಪಿ.ಎಫ್. (ಪೋಲಿಸರ) ಮಾರ್ಗದರ್ಶನದಲ್ಲಿ ಪ್ರಯಾಣಿಕರಿಗೆ ರೈಲು ನಿಲ್ದಾಣ ಸ್ವಚ್ಛತೆ ಬಗ್ಗೆ ಮನವರಿಕೆ ಮಾಡಿಕೊಟ್ಟರು.

ರೈಲು ನಿಲ್ದಾಣದ ವಿಶ್ರಾಂತಿ ಗೃಹಗಳು, ಸಾರ್ವಜನಿಕರು ಕೂಡುವ ಸ್ಥಳ ಮತ್ತು ರೈಲು ಬೊಗಿಗಳ ಶೌಚಾಲಯಗಳಿಗೆ ನೀರು ಹಾಕಿ ಸ್ವಚ್ಛಗೊಳಿಸಿದರು. ರೈಲು ನಿಲ್ದಾಣದ ವ್ಯವಸ್ಥಾಪಕರು ಮಾತನಾಡಿ ನಿಮ್ಮ ಸೇವೆ ಸಾರ್ಥಕ ಸೇವೆ, ನಮ್ಮೆಲ್ಲರಿಗೂ ಬಹಳ ಸಂತೋಷವಾಗಿದೆ ಎಂದು ಹೇಳಿದರು. ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಜಗದೀಶ ಬೋಳಸೂರ, ಶ್ರೀಮತಿ ಜಿ.ಆರ್. ಬಿಸನಾಳ, ಶ್ರೀಮತಿ ಕೆ. ಸುನಂದಾ, ಶ್ರೀ ಎಸ್.ಎಸ್. ಓಬಲೇಶ್ವರ, 32 ಸ್ಕೌಟ್ಸ್ ಮತ್ತು 32 ಗೈಡ್ಸ್‌ಗಳು ಸಮುದಾಯ ಸೇವೆಯಲ್ಲಿ ತೊಡಗಿದ್ದರು.

## ಹಾಸನ

ದಿನಾಂಕ 06-06-2014 ರಂದು ಹಾಸನದ ರಾಜೀವ ಶಿಕ್ಷಣ ಮಹಾವಿದ್ಯಾಲಯದ ವತಿಯಿಂದ ಬಿ.ಎಡ್. ಪ್ರಶಿಕ್ಷಣಾರ್ಥಿಗಳಿಗೆ ಏರ್ಪಡಿಸಲಾಗಿದ್ದ 3 ದಿನಗಳ ಸಮುದಾಯ ಜೀವನದ ಶಿಬಿರದ 2ನೇ ದಿನ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ, ಹಾಸನದ ವತಿಯಿಂದ 1 ದಿನದ ಸ್ಕೌಟಿಂಗ್ ಮತ್ತು ಗೈಡಿಂಗ್‌ನ ಪರಿಚಯಾತ್ಮಕ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು.

98 ಪ್ರಶಿಕ್ಷಣಾರ್ಥಿಗಳು ಭಾಗವಹಿಸಿದ್ದ ಈ ಕಾರ್ಯಕ್ರಮದ ಬೆಳಗಿನ ಅವಧಿಯಲ್ಲಿ ಸ್ಕೌಟಿಂಗ್ ಮತ್ತು ಗೈಡಿಂಗ್ ಬೆಳೆದು ಬಂದ ಇತಿಹಾಸ, ಸ್ಕೌಟಿಂಗ್ ಮತ್ತು ಗೈಡಿಂಗ್‌ನ ಆದರ್ಶ, ತತ್ತ್ವಗಳು ಹಾಗೂ ವೈಶಿಷ್ಟ್ಯತೆ, ಇಂದಿನ ಪೀಳಿಗೆಗೆ ಈ ಶಿಕ್ಷಣದ ಅಗತ್ಯತೆ ಪ್ರಯೋಜನದ ಪರಿಚಯ ನೀಡಲಾಯಿತು. ಮಧ್ಯಾಹ್ನದ ಅವಧಿಯಲ್ಲಿ ಸರಳ ಗಂಟುಗಳು, ಪ್ರಥಮ ಚಿಕಿತ್ಸೆ ಕುರಿತು ಪ್ರಾಯೋಗಿಕವಾಗಿ ವಿವರಿಸಲಾಯಿತು. ಸಂಜೆ ಅವಧಿಯಲ್ಲಿ ಸರಳ ಆಟಗಳನ್ನು ಆಡಿಸಲಾಯಿತು. ಶಿಬಿರಾಗ್ನಿ ಕಾರ್ಯಕ್ರಮದಲ್ಲಿ "ಪರಿಸರ ರಕ್ಷಣೆ"ಯ ಕುರಿತು ಪ್ರಶಿಕ್ಷಣಾರ್ಥಿಗಳಿಂದ ಅರಿವು ಮೂಡಿಸುವ ಚಟುವಟಿಕೆಗಳನ್ನು ಮಾಡಿಸಲಾಯಿತು.

ಈ ಕಾರ್ಯಕ್ರಮಲ್ಲಿ ಜಿಲ್ಲಾ ಕಾರ್ಯದರ್ಶಿ ಶ್ರೀ ಮುತ್ತೇಗೌಡ, ಶ್ರೀ ಎಂ.ಎಸ್. ಪ್ರಕಾಶ್, ಡಿ.ಟಿ.ಸಿ., ಹಾಗೂ ಶ್ರೀ ಜೆ.ಎಲ್. ಲೀಲಾಮಹೇಶ್ವರ್, ಹೆಚ್.ಡಬ್ಲ್ಯೂ.ಬಿ.(ಎಸ್.)

## ಬೀದರ್

ದಿನಾಂಕ 02-06-2014 ರಂದು ಬೀದರ್ ಜಿಲ್ಲಾ ಸಂಸ್ಥೆ ಹಾಗೂ ಆರೋಗ್ಯ ಇಲಾಖೆ ಇವರುಗಳ ಸಂಯುಕ್ತ ಆಶ್ರಯದಲ್ಲಿ "ವಿಶ್ವ ತಂಬಾಕು ಸೇವನೆ ನಿಷೇಧ ದಿನಾಚರಣೆ" ಆಚರಿಸಲಾಯಿತು. ಜಿಲ್ಲಾ ಆರೋಗ್ಯ ಅಧಿಕಾರಿ ಡಾ॥ ಹನುಮಂತಪ್ಪ ರವರು ಕಾರ್ಯಕ್ರಮವನ್ನುದ್ದೇಶಿಸಿ, ಇಂದು ತಂಬಾಕು ವಿವಿಧ ರೀತಿಯಲ್ಲಿ ಉಪಯೋಗಿಸಲ್ಪಡುತ್ತಿದ್ದು; ಇದರ ದುಷ್ಪರಿಣಾಮ ಇಂದಿನವರಿಗಲ್ಲದೆ ಮುಂದಿನ ಪೀಳಿಗೆಗೂ ಬೀರಲಿದೆ ಎಂದರು. ಇದೇ ಸಂದರ್ಭದಲ್ಲಿ ನಗರದಲ್ಲಿ ಜಾಗೃತಿ ಜಾಥಾ ನಡೆಯಿತು. ಜಾಥಾದಲ್ಲಿ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಪಾಲ್ಗೊಂಡರು.

**********

ಅಂತರ ರಾಷ್ಟ್ರೀಯ ರೈಲ್ವೇ ಲೆವೆಲ್ ಕ್ರಾಸಿಂಗ್ ವಾರೋತ್ಸವ, ಬೀದರ ಜಿಲ್ಲೆಯಲ್ಲಿ ಜೂನ್ 2 ರಿಂದ 6 ರ ವರೆಗೆ ನಡೆಯಿತು. ರೈಲು ಹಳಿ ದಾಟುವಾಗ ಎಚ್ಚರಿಕೆ ಹಾಗೂ ಸುರಕ್ಷಿತವಾಗಿ ದಾಟುವಂತೆ ಸಾರ್ವಜನಿಕರಲ್ಲಿ ಅರಿವು ಮೂಡಿಸುವ ನಿಟ್ಟಿನಲ್ಲಿ ರೈಲ್ವೆ ಇಲಾಖೆ ಹಾಗೂ ಪ್ರಾದೇಶಿಕ ಸಾರಿಗೆ ಇಲಾಖೆಯ ಸಂಯುಕ್ತಾಶ್ರಯದಲ್ಲಿ ಅಂತರ ರಾಷ್ಟ್ರೀಯ ರೈಲ್ವೆ ಲೆವೆಲ್ ಕ್ರಾಸಿಂಗ್ ವಾರೋತ್ಸವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಯಿತು. ಜಿಲ್ಲಾ ಮೋಟಾರು ವಾಹನ ತಪಾಸಣಾ ಅಧಿಕಾರಿ ಸುಧೀಂದ್ರಕುಮಾರ ಹಾಗೂ ರೈಲ್ವೆ ಸುರಕ್ಷಾ ವಿಭಾಗದ ಅಧಿಕಾರಿಗಳು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದು ಶಾಲಾ-ಕಾಲೇಜುಗಳಲ್ಲಿ ಸ್ಕೌಟ್ಸ್-ಗೈಡ್ಸ್‌ಗಳ ಮೂಲಕ ಅರಿವು ಮೂಡಿಸಲು, ಸಾರ್ವಜನಿಕರಿಗೆ ಜಾಗೃತಿ ಮೂಡಿಸಲು ಸಂಸ್ಥೆ ಸದಾ ಸಿದ್ಧವಿದೆ ಎಂದು ಜಿಲ್ಲಾ ಮುಖ್ಯ ಆಯುಕ್ತರು ನುಡಿದರು.

**************

ದಿನಾಂಕ 05-06-2014 ರಂದು ಬೀದರ ಜಿಲ್ಲೆಯ ಭಾಲ್ಕಿ ತಾಲೂಕು ಸ್ಥಳಿಯ ಸಂಸ್ಥೆಯ ಸರಕಾರಿ ಪ್ರೌಢಶಾಲೆಯ ಸ್ಕೌಟ್ಸ್-ಗೈಡ್ಸ್ ಗಳು "ವಿಶ್ವ ಪರಿಸರ" ದಿನಾಚರಣೆಯ ಅಂಗವಾಗಿ ತಮ್ಮ ಶಾಲಾ ಆವರಣ, ಕೈದೋಟವನ್ನು ಸ್ವಚ್ಛಗೊಳಿಸಿದರು. ನಂತರ ನಡೆದ ಕಾರ್ಯಕ್ರಮದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳಿಗೆ "ಮನೆಗೊಂದು ಮರ ನೆಡುವ ದೀಕ್ಷೆ" ನೀಡಲಾಯಿತು. ಪರಿಸರ ಸಂರಕ್ಷಣೆ, ನೈರ್ಮಲ್ಯ ಪರಿಸರ ಪ್ರೇಮ, ಮುಂತಾದ ವಿಷಯಗಳ ಗೋಷ್ಠಿಯಲ್ಲಿ ಸ್ಕೌಟ್ಸ್-ಗೈಡ್ಸ್ ಭಾಷಣ ಮಾಡಿದರು. ಪ್ರಥಮ, ದ್ವಿತೀಯ ಬಹುಮಾನಗಳನ್ನು ನೀಡಲಾಯಿತು.

**********

ದಿನಾಂಕ 12-06-2014 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ, ಕಾರ್ಮಿಕ ಇಲಾಖೆ ಮತ್ತು ಜಿಲ್ಲಾ ಆಡಳಿತದ ಸಂಯುಕ್ತ ಆಶ್ರಯದಲ್ಲಿ ಬಾಲಕಾರ್ಮಿಕ ವಿರೋಧಿ ದಿನ ಆಚರಿಸಲಾಯಿತು. ಜಿಲ್ಲಾಧಿಕಾರಿಗಳ ಕಛೇರಿಯಿಂದ ಹೊರಟ ಜಾಥಾದಲ್ಲಿ ಯುನಿಕ ಶಾಲೆ, ಡಾನ್-ಬಾಸ್ಕೊ ಬಾಲಕಾರ್ಮಿಕ ಮಕ್ಕಳ ಪುನರ್ವಸತಿ ಶಾಲೆ, ಸಂತ ಜೋಸೆಫ್ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

ನಂತರ ನಡೆದ ಕಾರ್ಯಕ್ರಮದಲ್ಲಿ ವಿವಿಧ ಗೋಷ್ಠಿಗಳು - ಬಾಲಕಾರ್ಮಿಕ ಮಕ್ಕಳ ಪುನರ್ವಸತಿ, ಶಿಕ್ಷಣ-ಉದ್ಯೋಗದ ಕುರಿತು ಉಪನ್ಯಾಸಗಳು ನಡೆದವು. ಕಾರ್ಯಕ್ರಮದಲ್ಲಿ ಜಿಲ್ಲಾ ಸಂಸ್ಥೆ ಮುಖ್ಯ ಆಯುಕ್ತ ಡಾ॥ ಸಿದಾರಡ್ಡಿ, ಜಿಲ್ಲಾ ಗೈಡ್ ಆಯುಕ್ತ ಶ್ರೀಮತಿ ಲೀಲಾವತಿ ಚಕೋತೆ ಜಿಲ್ಲಾ ಕಾರ್ಯದರ್ಶಿ ಶ್ರೀ ಶೇಖ್ ಮುಸ್ತಾಕ್ ಆಲಿ ಭಾಗವಹಿಸಿದ್ದರು.

***************

ದಿನಾಂಕ 05-06-2014 ರಂದು ತೋಟಗಾರಿಕಾ ಮಹಾವಿದ್ಯಾಲಯ ಬೀದರ, ಅರಣ್ಯ ಇಲಾಖೆ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ಹಾಗೂ ಜಿಲ್ಲಾ ಸಂಸ್ಥೆಯ ಸಂಯುಕ್ತ ಆಶ್ರಯದಲ್ಲಿ "ವಿಶ್ವ ಪರಿಸರ" ದಿನಾಚರಣೆಯನ್ನು ನಗರ ತೋಟಗಾರಿಕಾ ಮಹಾವಿದ್ಯಾಲಯದಲ್ಲಿ ಹಮ್ಮಿಕೊಳ್ಳಲಾಯಿತು. ಕಾರ್ಯಕ್ರಮವನ್ನು ಜಿಲ್ಲಾ ಸತ್ರ ನ್ಯಾಯಾಧೀಶರಾದ ಸಂಜೀವಕುಮಾರ ಹಂಚಾಟೆ ಉದ್ಘಾಟಿಸಿದರು. ಪರಿಸರ ಸಂರಕ್ಷಣೆಯ ಕುರಿತು ಉಪನ್ಯಾಸ, ಗೋಷ್ಠಿಗಳು ನಡೆದವು. ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

************

ದಿನಾಂಕ 04-06-2014 ರಂದು ಬೀದರ ಜಿಲ್ಲೆಯ ಶಾಹೀನ ಶಿಕ್ಷಣ ಸಂಸ್ಥೆಯಲ್ಲಿ ಆನೇಕಾಲು ರೋಗ ತಡೆಗಟ್ಟಲು ವಿತರಿಸಲಾಗುವ ಔಷಧಿ ಸೇವನೆಯ ಬಗ್ಗೆ ಸಾರ್ವಜನಿಕರಿಗೆ ಅರಿವು ಮೂಡಿಸಲು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಮತ್ತು ಆರೋಗ್ಯ ಇಲಾಖೆಯ ವತಿಯಿಂದ ರ‍್ಯಾಲಿಯನ್ನು ಹಮ್ಮಿಕೊಳ್ಳಲಾಯಿತು. ರ‍್ಯಾಲಿಯಲ್ಲಿ ಶಾಹೀನ ಶಿಕ್ಷಣ ಸಂಸ್ಥೆಯ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸದ್ದರು. ಕಾರ್ಯಕ್ರಮದಲ್ಲಿ ಜಿಲ್ಲಾ ಪಂಚಾಯತ್ ಉಪ-ಕಾರ್ಯದರ್ಶಿ ಶ್ರೀ ಸಭೀಮಶೇನ್ ಗುಡುರ್, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ, ಶ್ರೀ ಮದನಾ ವೈಜಿನಾಥ್ ರವರು ಭಾಗವಹಿಸಿದ್ದರು.

ಡಿ.ಇ.ಸಿ., (100 ಎಂ.ಜಿ.) ಗಳ ಸೇವನಾ ಕ್ರಮದ ಬಗ್ಗೆ ಮಾಹಿತಿಯನ್ನು ಆರೋಗ್ಯ ಅಧಿಕಾರಿಗಳು ಸ್ಕೌಟ್ಸ್-ಗೈಡ್ಸ್‌ಗಳಿಗೆ ನೀಡಿದರಲ್ಲದೆ ತಮ್ಮ ಬಡಾವಣೆಗಳಲ್ಲಿ ನಾಗರಿಕರಿಗೆ ಮಾಹಿತಿ ನೀಡಲು ಹೇಳಿದರು. ಇದೇ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಕಾರ್ಯಕ್ರಮಕ್ಕೆ ಸಹಕರಿಸಿದ ಸ್ಕೌಟ್ಸ್-ಗೈಡ್ಸ್‌ಗಳಿಗೆ ಅಭಿನಂದಿಸಿದರು.

*************

ಭಾರತ್ ಸ್ಕೌಟ್ಸ್ - ಗೈಡ್ಸ್ ಜಿಲ್ಲಾ ಸಂಸ್ಥೆ ಬೀದರ ವತಿಯಿಂದ "ಅಂಚೆ ಇಲಾಖೆಯ ಸೇವೆಗಳು" ಕಾರ್ಯಕ್ರಮ ಹಮ್ಮಿಕೊಳ್ಳಾಯಿತು ಆ ನಿಟ್ಟಿನಲ್ಲಿ ಜಿಲ್ಲೆಯ ಐದು ಸ್ಥಳೀಯ ಸಂಸ್ಥೆಗಳಲ್ಲಿ ಅಂಚೆ ಇಲಾಖೆಯ ಸಹಯೋಗದಲ್ಲಿ "ಸಣ್ಣ ಉಳಿತಾಯ" ಮಾಹಿತಿ ಕಾರ್ಯಾಗಾರವನ್ನು "ಸ್ಥಳೀಯ ಸಂಸ್ಥೆ ಔರಾದ್" ನಲ್ಲಿ ಹಮ್ಮಿಕೊಳ್ಳಲಾಯಿತು.

ಕಾರ್ಯಕ್ರಮದಲ್ಲಿ ಬೀದರ್ ಅಂಚೆ ಇಲಾಖೆಯ ಜಿಲ್ಲಾ ಅಂಚೆ ವಿಮಾ ಅಧಿಕಾರಿ ಶ್ರೀ ಸುಧೀಂದ್ರ ರವರು ಅಂಚೆ ಜೀವವಿಮೆ ಹಾಗೂ "ಅಂಚೆ ಇಲಾಖೆಯಲ್ಲಿ ಸಣ್ಣ ಉಳಿತಾಯದ ಪ್ರಯೋಜನಗಳ ಬಗ್ಗೆ ಉಪನ್ಯಾಸ ನೀಡಿದರು. "ಸ್ಕೌಟ್ ನಿಯಮದ 8ನೇ ಅಂಶ ಸ್ಕೌಟ್/ಗೈಡ್ಸ್ ಮಿತವ್ಯಯಿ" ಆದ್ದರಿಂದ ಈ ಎಳೆಯ ವಯಸ್ಸಿನಲ್ಲೆ ಮಕ್ಕಳ ಅನಗತ್ಯ ದುಂದುವೆಚ್ಚಗಳಿಗೆ ಕಡಿವಾಣ ಹಾಕುವ ಪರಿಪಾಠ ರೂಢಿಸಿಕೊಳ್ಳಬೇಕು ಎಂದರು.

ಕಾರ್ಯಕ್ರಮದಲ್ಲಿ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಕಾರ್ಯದರ್ಶಿಗಳು ಹಾಗು ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಪಾಲ್ಗೊಂಡು ಕಾರ್ಯಕ್ರಮ ಯಶಸ್ವಿಗೊಳಿಸಿದರು.

## ಬಾಗಲಕೋಟೆ

ದಿನಾಂಕ 05-06-2014 ರಂದು ವಿಶ್ವ ಪರಿಸರ ದಿನಾಚರಣೆಯನ್ನು ಜಿಲ್ಲಾ ಕೇಂದ್ರ ಕಛೇರಿಯಲ್ಲಿ ಆಚರಣೆ ಮಾಡಲಾಯಿತು. ಸ್ಥಳೀಯ ವಿವಿದ ಶಾಲೆಗಳಿಂದ ಸ್ಕೌಟ್ಸ್, ಗೈಡ್ಸ್, ಕಬ್ಸ್‌ಗಳು ಹಾಗೂ ಶಿಕ್ಷಕ-ಶಿಕ್ಷಕಿಯರು ಭಾಗವಹಿಸಿದ್ದರು.

ಸ್ಕೌಟ್-ಗೈಡ್‌ಗಳಿಗೆ ಪರಿಸರ ಕುರಿತು "ಭಾಷಣ" ಮತ್ತು "ಪ್ರಬಂಧ" ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು. ನಂತರ ಕಛೇರಿಯ ಆವರಣದಲ್ಲಿ "ಗಿಡ"ಗಳನ್ನು ನೆಡೆಸಲಾಯಿತು. ಕಾರ್ಯಕ್ರಮದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಎನ್.ಬಿ. ಗೋರವರ್ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಸಿ.ಎ. ಸಾವಳಗಿ, ಶಾಲೆಯ ಉಪ ಪ್ರಾಚಾರ್ಯರು ಶ್ರೀ ಕೆ.ಜಿ. ಮುಗಳಖೋಡ್, ಜಿಲ್ಲಾ ಆಯುಕ್ತರು ಸ್ಕೌಟ್ಸ್ ಶ್ರೀ ಜಿ.ಬಿ. ಇದ್ದಲಗಿ, ಜಿಲ್ಲಾ ಆಯುಕ್ತರು ಗೈಡ್ಸ್ ಶ್ರೀಮತಿ ಜಯಮ್ಮ, ಅಬ್ದುಲ್ ಪೋರ್ ಹಾಗೂ ಇತರ ಗಣ್ಯರು ಉಪಸ್ಥಿತರಿದ್ದರು. ಕ್ಷೇತ್ರ ಶಿಕ್ಷಣಾಧಿಕಾರಿಗಳು ಪರಿಸರ ಕುರಿತು ಸ್ಕೌಟ್-ಗೈಡ್ ಚಳವಳಿ ಕುರಿತು ಮಕ್ಕಳಿಗೆ ಹಲವಾರು ವಿಷಯಗಳನ್ನು ತಿಳಿಸಿದರು. ಕಾರ್ಯಕ್ರಮವನ್ನು ಜಿಲ್ಲಾ ಸಂಘಟಕರು ಶ್ರೀ ಎಸ್.ಹೆಚ್. ಹತ್ತಿಮತ್ತೂರ ನಡೆಸಿಕೊಟ್ಟರು. ಕೊನೆಯಲ್ಲಿ ವಂದನಾರ್ಪಣೆಯನ್ನು ಶ್ರೀ ಜಿ.ಬಿ. ಇದ್ದಲಗಿ ಸಲ್ಲಿಸಿದರು.

## ಬೆಳಗಾವಿ

ದಿನಾಂಕ 03-06-2014 ರಿಂದ 05-06-2014 ರ ವರೆಗೆ ಜಿಲ್ಲಾ ಸಂಸ್ಥೆ ಬೆಳಗಾವಿ ಇಲ್ಲಿ ರಾಜ್ಯ ಪುರಸ್ಕಾರ ಸ್ಕೌಟ್ಸ್-ಗೈಡ್ಸ್‌ಗಳಿಗೆ ಪೂರ್ವಭಾವಿ ತರಬೇತಿ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು. ಶಿಬಿರದ ನಾಯಕತ್ವವನ್ನು ಜಿಲ್ಲಾ ಕಾರ್ಯದರ್ಶಿ, ಶ್ರೀಮತಿ ಲಕ್ಷ್ಮೀ ಮಂಗಿ ವಹಿಸಿದ್ದರು. ಸಹಾಯಕರಾಗಿ ಶ್ರೀ ಡಿ.ಬಿ. ಅತ್ತಾರ್, ಶ್ರೀ ವ್ಹಿ.ಎಸ್. ಬಾಚಗೂಡಿ ಕಾರ್ಯ ನಿರ್ವಹಿಸಿದ್ದರು.

ಶಿಬಿರದಲ್ಲಿ 16 ಗೈಡ್ಸ್ ಮತ್ತು 17 ಸ್ಕೌಟ್ಸ್ ಭಾಗವಹಿಸಿದ್ದರು. ಎಲ್ಲ ಸ್ಕೌಟ್ಸ್-ಗೈಡ್ಸ್‌ಗಳಿಗೆ ಪ್ರವೇಶದಿಂದ ರಾಜ್ಯ ಪುರಸ್ಕಾರ ಪರೀಕ್ಷೆ ವರೆಗಿನ ವಿಷಯಗಳನ್ನು ಪರೀಕ್ಷಿಸಲಾಯಿತು.

***********

ದಿನಾಂಕ 05-06-2014 ರಂದು ಜಿಲ್ಲಾ ಸಂಸ್ಥೆ ಬೆಳಗಾವಿ ಇಲ್ಲಿ "ವಿಶ್ವ ಪರಿಸರ" ದಿನಾಚರಣೆ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಸ್.ವೈ. ಹುಡೇದ ಜಿಲ್ಲಾ ಸ್ಕೌಟ್ ಆಯುಕ್ತರು ಹಾಗು ಡಯಟ್ ಪ್ರಾಂಶುಪಾಲರಾದ ಶ್ರೀ ಜಿ.ಬಿ. ಮನ್ನಿಕೇರಿ ಸ್ಥಾನಿಕ ಆಯುಕ್ತರಾದ ಶ್ರೀ ಟಿ.ಡಿ. ಕಾಂಬೋಜಿ, ನಗರ ವಲಯ ಕಾರ್ಯದರ್ಶಿ ಶ್ರೀ ಎಸ್.ಎಂ. ನದಾಫ ಇವರುಗಳು ಗಿಡ ನೆಡುವುದರ ಮೂಲಕ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು.

ಮುಖ್ಯ ಅತಿಥಿಗಳಾದ ಶ್ರೀ ಜಿ.ಬಿ. ಮನ್ನಿಕೇರಿಯವರು ಪರಿಸರದ ಬಗ್ಗೆ ಮಾತನಾಡುತ್ತ. ಪರಿಸರದಿಂದ ಆಗುವ ಆಗು-ಹೋಗುಗಳ ಬಗ್ಗೆ ತಿಳಿಸಿಕೊಟ್ಟರು. ಪ್ರತಿಯೊಬ್ಬರು ಪರಿಸರವನ್ನು ರಕ್ಷಿಸಬೇಕು ಇದು ನಮ್ಮೆಲ್ಲರ ಹೊಣೆ ಎಂದು ಹೇಳಿದರು. ಜಿಲ್ಲಾ ಮುಖ್ಯ ಆಯುಕ್ತರು ಮಾತನಾಡುತ್ತ ನಮ್ಮ ಸುತ್ತ-ಮುತ್ತಲೂ ಪರಿಸರ ಉತ್ತಮವಾಗಿರಬೇಕು. ಇದಕ್ಕೆ ನಾವೆಲ್ಲರೂ ಒಂದೊಂದು ಗಿಡವನ್ನು ನೆಟ್ಟರೆ ಊರಿಗೊಂದು ವನ ಬೆಳೆಸಿದಂತೆ ಆಗುತ್ತದೆ ಇದಕ್ಕೆ ನಮ್ಮೆಲ್ಲರ ಪ್ರಯತ್ನ ಸದಾ ಇರಲಿ ಎಂದು ಹೇಳಿದರು.

ಜಿಲ್ಲಾ ಕಾರ್ಯದರ್ಶಿ ಶ್ರೀಮತಿ ಲಕ್ಷ್ಮೀ ಎಸ್. ಮಂಗಿ ಇವರು ಸ್ಕೌಟ್-ಗೈಡ್‌ಗಳಿಗೆ ಒಂದೊಂದು ಗಿಡವನ್ನು ದತ್ತುಕೊಟ್ಟು ಗಿಡವನ್ನು ನೆಡಲು ಸಹಕರಿಸಿ ಈ ಗಿಡ ಹೇಗೆ ಬೆಳೆಯುತ್ತದೆಯೋ ಹಾಗೆ ತಮ್ಮ ಭವಿಷ್ಯವು ಉಜ್ವಲವಾಗಿ ಬೆಳೆಯಲಿ ಎಂದು ಹಾರೈಸಿದರು.

ಕಾರ್ಯಕ್ರಮದಲ್ಲಿ ಸ್ಥಳೀಯ ಸ.ಮ.ಪ್ರಾ.ಶಾಲೆ. ಪ್ರಧಾನ ಗುರುಮಾತೆ. ಶ್ರೀಮತಿ ಆರ್.ಡಿ. ಪೆಡ್ನೇಕರ್ ಸಂತ ಜೋಸೆಫ್ ಬಾಲಕಿಯರ ಪ್ರೌಢಶಾಲೆಯ ಗೈಡ್ ಕ್ಯಾಪ್ಟನ್ ಶ್ರೀಮತಿ ಮೀನಾಗಾಮಾ ಜಿಲ್ಲಾ ಸಂಘಟಕ ಶ್ರೀ ವ್ಹಿ.ಎಸ್. ಬಾಚಗೂಡಿ, 125 ಸ್ಕೌಟ್-ಗೈಡ್‌ಗಳು ಉಪಸ್ಥಿತರಿದ್ದರು. ಜಿಲ್ಲಾ ಸಂಘಟಕ ಶ್ರೀ ಡಿ.ಬಿ. ಅತ್ತಾರ ಕಾರ್ಯಕ್ರಮ ನಿರೂಪಿಸಿ ಸ್ವಾಗತಿಸಿದರು. ಶ್ರೀ ಟಿ.ಡಿ. ಕಾಂಬೋಜಿ ವಂದಿಸಿದರು. ಪರಿಸರ ದಿನಾಚರಣೆ ಅಂಗವಾಗಿ ಮಕ್ಕಳಿಗೆ ಪ್ರಬಂಧ, ಚಿತ್ರಕಲಾ ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು.

## ಮೈಸೂರು

ದಿನಾಂಕ 08/06/2014ರ ಭಾನುವಾರ ಬೆಳಿಗ್ಗೆ 9.00 ಗಂಟೆಗೆ ಶ್ರೀ ಜಯಚಾಮರಾಜೇಂದ್ರ ಸ್ಕೌಟ್ ಮತ್ತು ಗೈಡ್ ಮೈದಾನದಲ್ಲಿ ಪರಸರ ದಿನಾಚಣೆಯನ್ನು ಆಚರಿಸಲಾಯಿತು.

ಸ್ಕೌಟ್ ಮತ್ತು ಗೈಡ್ ಮಕ್ಕಳು ಹಾಗೂ ಜಿಲ್ಲಾ ಪದಾಧಿಕಾರಿಗಳು ಮೈದಾನದಲ್ಲಿ ಬೆಳೆದಿದ್ದ ಪಾರ್ಥೇನಿಯಂ ಹಾಗೂ ಅನುಪಯುಕ್ತ ಗಿಡಗಳನ್ನು ತೆಗೆದು ಹಾಕಿದರು ಹಾಗೆಯೇ ಮೈದಾನದಲ್ಲಿ ಹೊಂಗೆ ಸಸಿಗಳನ್ನು ನೆಡಲಾಯಿತು.

ಈ ಕಾರ್ಯಕ್ರಮದಲ್ಲಿ ಡಾ.ಕೆ.ಬಿ. ಗುರುಮೂರ್ತಿ, ಜಿಲ್ಲಾ ಕಾರ್ಯದರ್ಶಿ, ಶ್ರೀಮತಿ ಸುಜಯ ಜಂಟಿ ಕಾರ್ಯದರ್ಶಿ, ಶ್ರೀಮತಿ ಮನೋಹರ ಪ್ರಭ, ಡಿಟಿಸಿ, ಶ್ರೀ ಅಜಯ ಕುಮಾರ್ ಜೈನ್ ಎಡಿಸಿ (ಸ್ಕೌಟ್), ಶ್ರೀ ಆರ್.ಪಿ ಚಂದ್ರ, ಜಿಲ್ಲಾ ಕ್ವಾಟರ್ ಮಾಸ್ಟರ್, ಶ್ರೀ ರಾಮಪ್ರಸಾದ್ ಡಿಓಸಿ, ಶ್ರೀ ಅಶೋಕ ಕುಮಾರ್ ಡಿ.ಓ, ಹಾಗೂ ಸ್ಕೌಟರ್ಸ್-ಗೈಡರ್ಸ್ ಭಾಗವಹಿಸಿದ್ದರು.

***********

ದಿನಾಂಕ : 05-06-2014 ರ ಗುರುವಾರದಂದು ನಂಜನಗೂಡು ಲಯನ್ಸ್ ಶಾಲೆಯಲ್ಲಿ ಪರಿಸರ ದಿನಾಚರಣೆಯನ್ನು ಹಮ್ಮಿಕೊಳ್ಳಲಾಗಿತ್ತು. ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಮೈಸೂರು ಜಿಲ್ಲೆಯ ಜಂಟಿ ಕಾರ್ಯದರ್ಶಿಗಳಾದ ಶ್ರೀಮತಿ ಸುಜಯ ಹಾಗೂ ಶ್ರೀಮತಿ ಮನೋಹರ ಪ್ರಭ ಜಿಲ್ಲಾ ತರಬೇತಿ ಆಯುಕ್ತರು ಭಾಗವಹಿಸಿ ಶಾಲಾ ಆವರಣದಲ್ಲಿ ಗಿಡಗಳನ್ನು ನೆಡುವ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದರು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿ ಮಾತನಾಡಿದ ಶಿಕ್ಷಣ ಸಂಸ್ಥೆಯ ಅಧ್ಯಕ್ಷರಾದ ಲಯನ್. ಎಸ್. ಜಯರಾಮುರವರು ಪ್ರತಿದಿನವೂ ಪರಿಸರ ದಿನವನ್ನಾಗಿ ಆಚರಿಸಿ, ನಿರ್ಮಲ ಪರಿಸರದ ನಿರ್ಮಾಣ ಮಾಡುವುದ ಮೂಲಕ ಸಮಾಜಕ್ಕೆ ಒಂದು ಒಳ್ಳೆಯ ಕೊಡುಗೆ ನೀಡಿ ಎಂದು ವಿದ್ಯಾರ್ಥಿಗಳಿಗೆ ಕಿವಿಮಾತು ಹೇಳಿದರು.

ಸಂಸ್ಥೆಯ ಕಾರ್ಯದರ್ಶಿಗಳಾದ ಲಯನ್ ಪಿ. ನಾಗರಾಜು ಹಾಗೂ ಖಜಾಂಚಿಗಳಾದ ಲಯನ್ ವೃಷಭೇಂದ್ರಪ್ಪ ಉಪಸ್ಥಿತರಿದ್ದರು. ಮುಖ್ಯೋಪಾಧ್ಯಾಯರಾದ ಶ್ರೀ ಕೆ.ಎಸ್. ಮಹೇಶ್ ಸ್ವಾಗತಿಸಿದರೆ, ಮುಖ್ಯ ಶಿಕ್ಷಕಿ ಶ್ರೀಮತಿ ತಾಯಮ್ಮ ವಂದಿಸಿದರು. ಸಹಶಿಕ್ಷಕಿ ಕುಮಾರಿ ಛಾಯ ಕಾರ್ಯಕ್ರಮ ನಿರೂಪಿಸಿದರು. ಸ್ಕೌಟ್ ಮತ್ತು ಗೈಡ್ ವಿದ್ಯಾರ್ಥಿಗಳು ಹಾಗೂ ಗೈಡ್ ಕ್ಯಾಪ್ಟನ್ ಶ್ರೀಮತಿ ಶೋಭ ಎನ್.ಎಸ್. ಶಾಲೆಯ ಎಲ್ಲಾ ಶಿಕ್ಷಕ ವೃಂದದವರು ವಿದ್ಯಾರ್ಥಿಗಳು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

## ಹಾವೇರಿ

ದಿನಾಂಕ 21/06/2014 ರಂದು ಜಿಲ್ಲಾ ಸಂಸ್ಥೆಗೆ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ರಾಜ್ಯ ಮುಖ್ಯ ಆಯುಕ್ತರು ಜಿಲ್ಲಾ ಸಂಸ್ಥೆಗೆ ಬೇಟಿ ನೀಡಿ, 2014–15ನೇ ಸಾಲಿನ ಕಾರ್ಯಕ್ರಮಗಳ ಬಗ್ಗೆ ಮತ್ತು ಜಿಲ್ಲಾ ಸಂಸ್ಥೆಯ ತರಬೇತಿ ಕೇಂದ್ರ ಅಭಿವೃದ್ಧಿಯ ಬಗ್ಗೆ ಸಮಗ್ರವಾಗಿ ಚರ್ಚೆ ಮಾಡಿ ಸಲಹೆ–ಸೂಚನೆಗಳನ್ನು ನೀಡಿದರು. ಸಂದರ್ಶನ ಕಾಲದಲ್ಲಿ ಶ್ರೀ ಆರ್.ಆರ್. ಕಾಶೆಪ್ಪನವರ, ಜಿಲ್ಲಾ ಕಾರ್ಯದರ್ಶಿ, ಶ್ರೀ ಮಲ್ಲಿಕಾರ್ಜುನ ಕೋಟುರ ಜಿಲ್ಲಾ ಸ್ಥಾನಿಕ ಆಯುಕ್ತರು ಶ್ರೀ ರವಿ ಹಿಂಚಿಗೇರಿ, ಜಿಲ್ಲಾ ಸ್ಥಾನಿಕ ಆಯುಕ್ತರು ಶ್ರೀ ಎಂ.ಆರ್. ಪಾಟೀಲ ಡಿ.ಟಿ.ಸಿ., ಶ್ರೀ ಎ.ಎಲ್. ಶೇಖಸೂರಣಗಿ, ಡಿ.ಓ.ಸಿ., ಹಾಗೂ ತಾಲ್ಲೂಕು ಕಾರ್ಯದರ್ಶಿಗಳಾದ ಶ್ರೀ ಜೆ.ಜಿ. ಗವೇನವರ, ಶ್ರೀ ಎಸ್.ಕೆ. ದಿವಾಕರಮೂರ್ತಿ, ಶ್ರೀ ಬಿ.ಎಚ್. ಓಲೇಕಾರ, ಶ್ರೀ ಬಸನಗೌಡ್ರ ಉಪಸ್ಥಿತರಿದ್ದರು.

## ಶ್ರದ್ಧಾಂಜಲಿ



ಹಾವೇರಿ ಜಿಲ್ಲಾ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಹಿಂದಿನ ಜಿಲ್ಲಾ ಮುಖ್ಯ ಆಯುಕ್ತರಾದ ಹಾಗೂ ಜಿಲ್ಲಾ ಸ್ಥಾನಿಕ ಆಯುಕ್ತರಾದ ಶ್ರೀ ಪ್ರಭಾಕರ ರಾವ್ ಎಂ. ಮಂಗಳೂರು ಅವರ ಪತ್ನಿ ಶ್ರೀಮತಿ ಪಿ. ಗೀತಾ ಮಂಗಳೂರು ರವರು ದಿನಾಂಕ 05–06–2014 ರಂದು ಹಾವೇರಿಯಲ್ಲಿ ದೈವಾಧೀನರಾದರು.

ಶ್ರೀಮತಿ ಗೀತಾ ಪಿ. ಮಂಗಳೂರು ಅವರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಹಾವೇರಿ ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾಗಿ ಸುಮಾರು 10 ವರ್ಷಗಳ ಕಾಲ ಸೇವೆ ಸಲ್ಲಿಸಿದ್ದಾರೆ ಹಾಗೂ ಜಿಲ್ಲೆಯ ವಿವಿಧ ಸ್ತ್ರೀ ಸಂಘಟನೆಗಳಲ್ಲಿ ಹಾಗೂ ಸಂಘ–ಸಂಸ್ಥೆಗಳಲ್ಲಿ ಅಧ್ಯಕ್ಷರು / ಉಪಾಧ್ಯಕ್ಷರು / ಕಾರ್ಯದರ್ಶಿಗಳಾಗಿ ಅತ್ಯುತ್ತಮವಾಗಿ ಸೇವೆ ಸಲ್ಲಿಸಿರುತ್ತಾರೆ.

ಮೃತರ ಆತ್ಮಕ್ಕೆ ಚಿರಶಾಂತಿಯನ್ನು ನೀಡಲೆಂದು ಮತ್ತು ಅವರ ಅಗಲಿಕೆಯಿಂದ ಕುಟುಂಬದ ಸದಸ್ಯರಿಗಾಗಿರುವ ದುಃಖವನ್ನು ಭರಿಸಲು ಶಕ್ತಿನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

ರಾಜ್ಯ ಕಾರ್ಯದರ್ಶಿ

............... ಹಿಂದಿನ ಸಂಚಿಕೆಯಿಂದ

ಅಧ್ಯಾಯ – 4 ಶಿಬಿರಾಗ್ನಿ ಉದಂತ ಸಂ–11

# ಮಾರ್ಗ ಶೋಧನೆ

## (TRACKING)

## ಕುರುಹುಗಳ ಅವಲೋಕನ

**ಕುರುಹುಗಳನ್ನು ಗಮನಿಸುವುದು – ಜನರ ವಿವರಗಳು – ಶವದ ಸುತ್ತಲಿನ ಕುರುಹುಗಳು – ಹಳ್ಳಿಗಾಡು ಪ್ರದೇಶದ ವಿವರಗಳು – ಸ್ಕೌಟುಗಳು ತಮ್ಮ ಕಣ್ಣು, ಕಿವಿ ಮತ್ತು ಮೂಗುಗಳನ್ನುಪಯೋಗಿಸುವುದು – ರಾತ್ರಿಯ ವೇಳೆಯ ಸ್ಕೌಟಿಂಗ್**

**ಕುರುಹುಗಳು :**

ಸೂಕ್ಷ್ಮ ವಿವರಗಳೆನಿಸಿದ ಹೆಜ್ಜೆ ಗುರುತುಗಳು, ಮುರಿದ ರೆಂಬೆಗಳು, ತುಳಿದಿರುವ ಹುಲ್ಲು, ಆಹಾರದ ತುಣುಕುಗಳು, ರಕ್ತದ ಕಲೆಗಳು, ಕೂದಲು ಮುಂತಾದ ಸೂಕ್ಷ್ಮವಾದ ವಿವರಗಳು – ಹುಡುಕುತ್ತಿರುವ ಸುದ್ದಿಯ ಬಗ್ಗೆ ಬೆಳಕು ಚೆಲ್ಲುವ, ಯಾವುದೇ ವಿವರಗಳಿಗೆ ಸ್ಕೌಟುಗಳು 'ಕುರುಹು'ಗಳು ಎನ್ನುತ್ತಾರೆ.

ಶ್ರೀಮತಿ ವಾಲ್ಟರ್ ಸ್ಮಿತ್‌ಸನ್‌ರವರು, ಕಾಶ್ಮೀರದಲ್ಲಿ ಪ್ರಯಾಣ ಮಾಡುವಾಗ, ಕೆಲವು ಇಂಡಿಯಾದ ಜಾಡು ಹಿಡಿಯುವವರನ್ನು ಅನುಸರಿಸುತ್ತಿದ್ದರು. ಅವರುಗಳು 'ಜಿಂಕೆ'ಯೊಂದನ್ನು ಕೊಂದು ಎಳೆದುಕೊಂಡು ಹೋಗಿದ್ದ 'ಚಿರತೆ'ಯ ಹೆಜ್ಜೆಯ ಗುರುತುಗಳನ್ನು (Pug mark) ಜಾಡು ಹಿಡಿದು ಹೋಗುತ್ತಿದ್ದರು. ಇದ್ದಕ್ಕಿದ್ದಂತೆ ಒಂದು ವಿಶಾಲವಾದ ಹಾಸು ಬಂಡೆಯು ಬಂದಿತು. ಅಲ್ಲಿ ಚಿರತೆಯ, ಮೃದುವಾದ, ಹೆಜ್ಜೆಯ ಗುರುತುಗಳು ಇರುವ ಸಾಧ್ಯತೆಯಿರಲಿಲ್ಲ. ಜಾಡು ಹಿಡಿಯುವವನು ಬಂಡೆಯ ಕಡಿದಾದ ಅಂಚಿನವರೆಗೂ ಹೋದನು. ಸಾಧ್ಯವಾಗಲಿಲ್ಲ. ಕೈಯನ್ನು ಒದ್ದೆ ಮಾಡಿಕೊಂಡು, ಬಂಡೆಯ ಮೇಲೆ ಅಂಚಿನಲ್ಲಿ ಕೈಯಾಡಿಸಿದನು. ಕೊನೆಗೊಂದು ಕಡೆ, ಜಿಂಕೆಯ ಕೂದಲು ಕೈಗೆ ಅಂಟಿಕೊಂಡಿತು. ಇದರಿಂದ, ಚಿರತೆಯು ಬಂಡೆಯ ಅಂಚಿನಲ್ಲಿ ಜಿಂಕೆಯನ್ನು ಎಳೆದುಕೊಂಡು ಹೋಗಿರಬಹುದಾದ ಜಾಗವನ್ನು ಪತ್ತೆ ಹಚ್ಚಿದನು. ಆ ಕೆಲವು ಕೂದಲುಗಳನ್ನೇ ಸ್ಕೌಟ್‌ಗಳು "ಕುರುಹು"ಗಳು (Signs) ಎಂದು ಕರೆಯುವುದು.

ಶ್ರೀಮತಿ ಸ್ಮಿತ್‌ಸನ್ ರವರ, ಜಾಡುಗಾರನು, ಇಂತಹ ಸೂಕ್ಷ್ಮವಾದ ಕುರುಹುಗಳಿಂದ, ಕರಡಿಗಳನ್ನು ಪತ್ತೆಹಚ್ಚಿದನು. ಒಮ್ಮೆ ಒಂದು ಮರದ ತೊಗಟೆಯ ಮೇಲೆ ಆಗ ತಾನೇ ಕರಡಿಯ ಉಗುರಿನಿಂದ ಕೆರೆದಿದ್ದ

ಗುರುತುಗಳನ್ನು ಗಮನಿಸಿದನು. ಇನ್ನೊಂದು ಮರದ ತೊಗಟೆಯ ಮೇಲೆ ಕರಡಿಯ ಒಂದು ಕರಿಯ ಕೂದಲು ಅಂಟಿಕೊಂಡಿರುವುದನ್ನು ಕಂಡನು. ಇದರಿಂದ ಕರಡಿಯು ಆ ಮರದ ಕಾಂಡದ ಮೇಲೆ, ತನ್ನ ಬೆನ್ನನ್ನು ಉಜ್ಜಿಕೊಂಡಿರುವುದಾಗಿ ಅರ್ಥಮಾಡಿಕೊಂಡನು.

**ಕುರುಹುಗಳನ್ನು ಗಮನಿಸುವುದು :**

ಯುದ್ಧ ಮಾಡುವ ಸೈನಿಕನಾಗಲೀ, ಬೇಟೆಗಾರನಾಗಲೀ ಅಥವಾ ಶಾಂತಿದೂತ ಸ್ಕೌಟ್ ಆಗಲೀ, ಬಹುಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ "ಯಾವುದೂ ಅವನ ಗಮನವನ್ನು ತಪ್ಪಿಸಿಕೊಳ್ಳಬಾರದು." ಸಣ್ಣ ಸಣ್ಣ ಅಂಶಗಳನ್ನೂ, ಸೂಕ್ಷ್ಮ ಗುರುತುಗಳನ್ನೂ ಗಮನಿಸಿ, ಅದರ ಅರ್ಥವನ್ನು ತಿಳಿದುಕೊಳ್ಳಬೇಕು. ಕೋಮಲ ಪಾದನು ಎಲ್ಲವನ್ನೂ ಗಮನಿಸುವ, ಯಾವುದೂ ಅವನ ದೃಷ್ಟಿಯಿಂದ ತಪ್ಪಿಸಿಕೊಳ್ಳದ ಸ್ಥಿತಿಗೆ ಬರಬೇಕಾದರೆ, ಸಾಕಷ್ಟು ಅಭ್ಯಾಸ ಮಾಡಬೇಕು. ಅದನ್ನು ನಗರ ಪ್ರದೇಶದಲ್ಲಾಗಲೀ, ಗ್ರಾಮಾಂತರ ಪ್ರದೇಶದಲ್ಲಾಗಲೀ ಏಕ ರೀತಿಯಲ್ಲಿಸ ಪ್ರಯಾಸಪಟ್ಟು ಕಲಿಯಬಹುದು.

ಅದೇ ರೀತಿಯಲ್ಲಿ ವಿಲಕ್ಷಣವಾದ ಶಬ್ದ. ವಿಚಿತ್ರ ರೀತಿಯ ವಾಸನೆ ಇವುಗಳನ್ನು ಗಮನಿಸಿದಾಗ, ಅವುಗಳ ಅರ್ಥಗಳನ್ನು ತಿಳಿದುಕೊಳ್ಳಲೆತ್ನಿಸಿ. ನೀವು ಈ ರೀತಿಯಲ್ಲಿ ಕುರುಹುಗಳನ್ನು ಗಮನಿಸಲು ಪ್ರಯತ್ನಿಸದಿದ್ದರೆ, ಅದು ಇದು ಕೂಡಿಸಿ ಹೇಳಲು, ಏನೂ ಇರದೆ, ನೀವು ಸ್ಕೌಟ್‌ಗಳಾಗಿ ಪ್ರಯೋಜನವಿಲ್ಲ.

ಹತ್ತಿರದಲ್ಲಿರಲಿ, ದೂರದಲ್ಲಿರಲಿ, ತಾನು ನೋಡಿ ಹೇಳುವುದಕ್ಕೆ ಮುಂಚೆ, ಇತರರು ಕಂಡು ಹೇಳಿದರೆ, ತನಗೆ ಅವಮಾನಕರವೆಂದು ಸ್ಕೌಟಾದವನು ಭಾವಿಸುತ್ತಾನೆ.

ನಿಜವಾಗಿ ಶಿಕ್ಷಿತನಾದ ಸ್ಕೌಟ್‌ನ ಜೊತೆಯಲ್ಲಿ, ನೀವು ಹೊರಗೆ ಹೋದರೆ, ಅವನ ಕಣ್ಣುಗಳು ಸದಾ ಚಲಿಸುತ್ತಿರುವುದನ್ನೂ, ಎಲ್ಲಾ ದಿಕ್ಕುಗಳಲ್ಲಿಯೂ ಹತ್ತಿರದಲ್ಲಾಗಲೀ, ದೂರದಲ್ಲಾಗಲೀ, ಏನಾದರೂ ವಿಶೇಷವನ್ನು ಕಾಣಲು ತವಕಿಸುತ್ತಿರುವುದನ್ನೂ ಗಮನಿಸಬಹುದು.

ಲಂಡನ್ ಹೈಡ್ ಪಾರ್ಕ್‌ನಲ್ಲಿ, ನಾನು ಒಬ್ಬ ಮಿತ್ರರೊಡನೆ ಹೋಗುತ್ತಿದ್ದೆ. ಅವರು ಇದ್ದಕ್ಕಿದ್ದಂತೆ "ಆ ಕುದುರೆಯು ಸ್ವಲ್ಪ 'ಸರ್ಪಸರಸ್ಸಿನ' (Serpentine lake) ಬಳಿ ಗಮನ ಹರಿಸುತ್ತಿದ್ದುದನ್ನು ಕಂಡೆನು ಎಂದು ಹೇಳಿದರು. ಮರುಕ್ಷಣದಲ್ಲಿ ನಾವು ನಡೆಯುತ್ತಿದ್ದ ಹಾದಿಯಲ್ಲಿ ಬಿದ್ದಿದ್ದ, ಒಂದು ವಿಚಿತ್ರ ರೀತಿಯ ಗುಂಡಿಯನ್ನು ಕೈಗೆತ್ತಿಕೊಂಡರು. ಅವರ ಕಣ್ಣುಗಳು ಏಕಕಾಲದಲ್ಲಿ, ದೂರದಲ್ಲಿಯೂ, ಹತ್ತಿರದಲ್ಲಿಯೂ, ಗಮನ ಹರಿಸುತ್ತಿದ್ದುವು.

.....ಮುಂದುವರೆಯುತ್ತದೆ

# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾಪತ್ರಿಕೆ

# Karnataka Scout & Guide News Magazine




ಸ್ಕೌಟಿಂಗ್‌ನ ವಿಶೇಷತೆಯನ್ನು ಒತ್ತಿ ಹೇಳಬೇಕಾಗಿಲ್ಲ. ಈ ಚಳವಳಿಯು ಯುವಕ-ಯುವತಿಯರಿಗೆ ಯೋಗ್ಯ ತರಬೇತಿ ನೀಡುವ ಮೂಲಕ ಅವರಲ್ಲಿ ಚಾರಿತ್ರ್ಯ ಪ್ರಜ್ಞೆ ಬೆಳೆಸಿ, ಅವರು ಸಮಾಜದ ದೃಢ, ಶಿಸ್ತುಬದ್ಧ ಸದಸ್ಯರಾಗಲು ರೂಪುಗೊಂಡಿದೆ. ಪ್ರತಿಯೊಬ್ಬ ಸ್ಕೌಟ್, ಗೈಡ್ ನಿಯಮ ಸ್ಮರಿಸಿಕೊಂಡು ತಮ್ಮ ಕರ್ತವ್ಯವನ್ನು ನಿರ್ಭಯವಾಗಿ ನೆರವೇರಿಸಲು ಹಾಗೂ ರಾಷ್ಟ್ರದಲ್ಲಿ ಸದಾಶಯುದ ರಾಯಭಾರಿಗಳಾಗಿರ ಬೇಕೆಂಬುದು ನನ್ನ ಆಶಯ.

– ಜಯಚಾಮರಾಜ ಒಡೆಯರ್


Monthly, Published by
**The Bharat Scouts & Guides, Karnataka**
State Headquarters, Kondajji Basappa Road
Prof. P. Sivashankar Circle, Fort
Bangalore-560 002. Tel : 26701227





**ಸಂಚಿಕೆಯ ವಾರ್ಷಿಕ ಚಂದಾ ರೂ.100/-**
**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ**
**ವಾರ್ಷಿಕ ಚಂದಾ ರೂ. 100/-**

ಚಂದಾಹಣವನ್ನು
ರಾಜ್ಯ ಕಾರ್ಯದರ್ಶಿ ಹಾಗೂ ಸಂಪಾದಕರು
ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ಕೇಂದ್ರ ಕಛೇರಿ, ಕೊಂಡಜ್ಜಿ ಬಸಪ್ಪ ರಸ್ತೆ,
ಪ್ರೊ. ಪಿ. ಶಿವಶಂಕರ್ ವೃತ್ತ, ಕೋಟೆ,
ಬೆಂಗಳೂರು-560 002
ಇವರ ವಿಳಾಸಕ್ಕೆ ಮನಿ ಆರ್ಡರ್ (ಎಂ.ಓ)
ಮೂಲಕ ಕಳುಹಿಸಬಹುದು



ರಾಜ್ಯ ಪುರಸ್ಕಾರ ಪ್ರಶಸ್ತಿ ಪಡೆದ ಬಿಜಾಪುರ ಜಿಲ್ಲಾ ಸ್ಕೌಟ್ಸ್-ಗೈಡ್ಸ್‌ಗಳು ವಿಧಾನಸೌಧಕ್ಕೆ ದಿನಾಂಕ 11 ಜೂನ್ 2014ರಂದು ಭೇಟಿ ನೀಡಿದ ಸಂದರ್ಭದಲ್ಲಿ ಮುದ್ದೇಬಿಹಾಳ್ ಶಾಸಕರಾದ ಮಾನ್ಯ ಶ್ರೀ ಸಿ.ಎಸ್. ನಾಡಗೌಡ ಅವರು ಅಭಿನಂದಿಸಿದರು.



ಧಾರವಾಡದ ನೂತನ ಜಿಲ್ಲಾಧಿಕಾರಿಯಾಗಿ ಅಧಿಕಾರ ವಹಿಸಿಕೊಂಡ ಶ್ರೀ ರಾಜೇಂದ್ರ ಚೋಳನ್, ಭಾ.ಆ.ಸೇ ಇವರನ್ನು ಜಿಲ್ಲಾ ಸಂಸ್ಥೆಯಿಂದ ಅಭಿನಂದಿಸಲಾಯಿತು. ಚಿತ್ರದಲ್ಲಿ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಎಂ.ಎಂ. ಲೋಂಡೆ, ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ವಿ.ವಿ. ಕಟ್ಟಿ, ಜಿಲ್ಲಾ ಕಾರ್ಯದರ್ಶಿ ಶ್ರೀಮತಿ ಪ್ರಭಾ ಲೋಂಡೆ ಮತ್ತು ಇತರರಿದ್ದಾರೆ.



ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಬೀದರ್ ಹಾಗೂ ಅಂಚೆ ಇಲಾಖೆಯ ಸಹಯೋಗದಲ್ಲಿ ಸ್ಥಳೀಯ ಸಂಸ್ಥೆ ಔರಾದ್‌ನಲ್ಲಿ ಜರುಗಿದ "ಸಣ್ಣ ಉಳಿತಾಯ" ಮಾಹಿತಿ ಕಾರ್ಯಾಗಾರದಲ್ಲಿ ಬೀದರ್ ಅಂಚೆ ಇಲಾಖೆಯ ಜಿಲ್ಲಾ ಅಂಚೆ ವಿಮಾ ಅಧಿಕಾರಿ ಶ್ರೀ ಸುಧೀಂದ್ರ ರವರು ಮಾಹಿತಿ ನೀಡುತ್ತಿರುವುದು.



ಬಿಜಾಪುರದಲ್ಲಿ ವಿಶ್ವಪರಿಸರ ದಿನಾಚರಣೆ ಅಂಗವಾಗಿ ಸಾ.ಶಿ. ಇಲಾಖೆಯ ಜಿಲ್ಲಾ ತರಬೇತಿ ಸಲಹೆಗಾರ ಹಾಗೂ ವಿಷಯ ಪರೀವೀಕ್ಷಕರಾದ ಶ್ರೀ ನಾಗೇಂದ್ರ ಸಿನ್ನೂರ ಸಸಿ ನೆಟ್ಟು ನೀರೆರೆದರು. ಚಿತ್ರದಲ್ಲಿ ಜಿಲ್ಲಾ ಪದಾಧಿಕಾರಿಗಳು ಹಾಗೂ ಗೈಡ್ಸ್‌ಗಳಿದ್ದಾರೆ.




05 ಜೂನ್ 2014ರಂದು ಕೊಲಾರ ಜಿಲ್ಲೆಯ ವಡಗೂರಿನ ಸ.ಹಿ.ಪ್ರಾ ಶಾಲೆಯಲ್ಲಿ ಜರುಗಿದ "ವಿಶ್ವ ಪರಿಸರ ದಿನಾಚರಣೆ" ಪ್ರಯುಕ್ತ ಶ್ರೀ ಅಶೋಕ್ ಕುಮಾರ್, ಸಹಾಯಕ ಪೋಲಿಸ್ ವರಿಷ್ಠಾಧಿಕಾರಿ ಸಸಿಯನ್ನು ನೆಟ್ಟರು. ಚಿತ್ರದಲ್ಲಿ ಸ್ಕೌಟ್ ಮಾಸ್ಟರ್ ಮತ್ತು ಸ್ಕೌಟ್ಸ್-ಗೈಡ್ಸ್‌ಗಳಿದ್ದಾರೆ.



05 ಜೂನ್ 2014ರಂದು ಸ.ಹಿ.ಪ್ರಾ. ಶಾಲೆ ಕತ್ವಾಡಿಪುರ ಮೈಸೂರು ಜಿಲ್ಲೆಯಲ್ಲಿ ಜರುಗಿದ "ವಿಶ್ವಪರಿಸರ ದಿನಾಚರಣೆ" ಅಂಗವಾಗಿ ಶ್ರೀಮತಿ ಮನೋಹರ ಪ್ರಭ, ಡಿ.ಟಿ.ಸಿ.(ಗೈಡ್ಸ್), ಸಹಕಾರ್ಯದರ್ಶಿ ಶ್ರೀಮತಿ ಸುಜಿಯಾ, ಗೈಡ್ ಕ್ಯಾಪ್ಟನ್ ಶ್ರೀಮತಿ ಶೋಭಾ ಹಾಗೂ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀಮತಿ ಬಿ.ಆರ್. ರಾಧಿಕರವರು ಸಸಿಯನ್ನು ನೆಡುತ್ತಿರುವುದು. ಚಿತ್ರದಲ್ಲಿ ಗೈಡ್ಸ್‌ಗಳಿದ್ದಾರೆ.

Regd. as News Paper (Magazine) RNI No : 13348/1959. Postal Regd. No KA/BGW-549/2012-2014
Permitted to Post under WPP System. Vide No.: WPP-87.
Posted at: Mail Business Centre, Bangalore GPO on 25, 28 & 30 of every month (No. of Pages : 4+20=24





View of the Scouts-Guides, Scouters-Guiders, Parents, Wellwishers and invitees on the occasion of Rajyapuraskar Rally Programme held at Glass House, Raj Bhavan on 11th June 2014.





05 ಜೂನ್ 2014ರಂದು ಬೆಂಗಳೂರು ಶಾಂತಿಗೃಹದಲ್ಲಿ ಜರುಗಿದ "ವಿಶ್ವಪರಿಸರ ದಿನಾಚರಣೆ" ಕಾರ್ಯಕ್ರಮದಲ್ಲಿ ಭಾಗವಹಿಸಿದ ಸ್ಕೌಟ್-ಗೈಡ್‌ಗಳ ವಿಹಾಂಗಮ ನೋಟ.



05 ಜೂನ್ 2014ರಂದು "ವಿಶ್ವಪರಿಸರ ದಿನಾಚರಣೆ" ಕಾರ್ಯಕ್ರಮದಲ್ಲಿ ಭಾಗವಹಿಸಿದ ಉಡುಪಿ ಜಿಲ್ಲೆಯ ಸ್ಕೌಟ್ಸ್-ಗೈಡ್ಸ್‌ಗಳು.



05 ಜೂನ್ 2014ರಂದು ಚಿತ್ರದುರ್ಗ ಜಿಲ್ಲಾಸಂಸ್ಥೆ ವತಿಯಿಂದ ಜರುಗಿದ "ವಿಶ್ವಪರಿಸರ ದಿನಾಚರಣೆ" ಕಾರ್ಯಕ್ರಮದಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್‌ಗಳಿಗೆ ಅರಣ್ಯ ಇಲಾಖೆಯಿಂದ ಸಸಿಗಳನ್ನು ವಿತರಿಸುತ್ತಿರುವುದು.






If not delivered, please return to :
THE EDITOR, Karnataka Scout & Guide
State Headquarters, Kondajji Basappa Road.
Prof. P. Sivashankar Circle, Fort
Bangalore - 560 002. Ph: 080-26701227
e-mail.: shq@scout.org.in

**Published by : The Bharat Scouts & Guides, Karnataka, State Headquarters, Fort, Bangalore - 560 002.**
**Publisher & Editor : M.A. Khalid. Printed by : L. Lingappa, M.D. at Sathyasri Printers Pvt. Ltd.,**
**16/1, 3rd Cross, 2nd Main, Kasturiba Nagar, Mysore Road, Bangalore - 560 026**